ದೇವನೂರ ಮಹಾದೇವ, 13, AB ... ಶ್ರೀ ... 28

## ...ಂದಿರಾ ಹತ್ಯೆಗೆ ದಸಂಸ ಸಂತಾಪ

...ಪ್ರಧಾನಿ ಇಂದಿರಾ ಅವರ ಭೀಕರ ಹತ್ಯೆಯು ...ತ ಸಂಘರ್ಷ ಸಮಿತಿಗೆ ತೀವ್ರ ಸಂಕಟ ಉಂಟು ...ಡಿದೆ.

...ಕೊಲೆಯ ಕತ್ತಿ ಕೆಳಗೆ ಜೀವಿಸುತ್ತಿರುವ ದಲಿತರ ...ಯಕಿನ ಸಂಘಟನೆಯಾದ ದಲಿತ ಸಂಘರ್ಷ ...ಮಿತಿಗೆ ದೇಶದ ಪ್ರಧಾನಿಯದೇ ಕೊಲೆಯಾಗಿರು ...ರು ಹೆಚ್ಚಿನ ತಲ್ಲಣ ಹುಟ್ಟಿಸಿದೆ.

...ಕೊಲೆ ಹಿಂಸೆಯು ಯಾವ ಸಮಸ್ಯೆಗೂ ಪರಿ...ರವಾಗಿರದೆ ಬಿಕ್ಕಟ್ಟನ್ನು ಉಲ್ಬಣಗೊಳಿಸು



ವುದರಿಂದ ಇಂದಿರಾ ಅವರ ಕೊಲೆ ಈ... ಸಮಸ್ಯೆಗಳನ್ನು ಮತ್ತೂ ಹೆಚ್ಚಿಸಿದೆ. ಈಗ... ನಾವೇ ಸಾಂತ್ವಾನಗೊಳಿಸಿಕೊಳ್ಳಬೇಕಾದ ... ಪರಿಸ್ಥಿತಿಬಂದಿದೆ.

ಈ ಉಲ್ಬಣ ಪರಿಸ್ಥಿತಿಯನ್ನು ಯಾರೇ ಯಾವ ರೂಪದಲ್ಲೇ ಬಳಸಿಕೊಳ್ಳುವುದು ಪ್ರಧಾನಿ ಹಂತಕರ ಮನಸ್ಥಿತಿಯಂಥದೇ ಕ್ರೂರ ಪಾತಕವಾಗುವುದರಿಂದ,. ಈಗ ಅಹಿಂಸೆ ಮತ್ತು ಪ್ರಜಾಪ್ರಭುತ್ವ ಮಾತ್ರ ಭಾರತವನ್ನು ಮತ್ತೊಮ್ಮೆ ಉಳಿಸಬಲ್ಲದು. ಉಳುವಿನತ್ತ ಚಿಂತಿಸಲು ಜನತೆಗೆ ದಲಿತ ಸಂಘರ್ಷ ಸಮಿತಿ ಪ್ರಾರ್ಥಿಸುತ್ತದೆ.


# ಪಂಚಮ

ಸಂಪುಟ : 8 ನವಂಬರ್ 5-20, 1984 ಬೆಲೆ : 1-00 ಸಂಚಿಕೆ : 21


# ದಲಿತನನ್ನು ಕೊಲ್ಲುತ್ತಾ ಸಾವಿನ ಕಡೆ ನಡೆಯುತ್ತಿರುವ ರೈತಸಂಘ



...ಇಂಥ ಬಲಿಷ್ಠ ದೇಹದಿಂದಲೂ ... ...ಜೀವ ಕಿತ್ತುಕೊಂಡ ರೈತಸಂಘ

...ಸಂಘದ ಕೃಷ್ಣೇಗೌಡನ ಹಲ್ಲೆಗೆ ...ತ್ತಾಗಿದ್ದ ದಲಿತ ಪುಟ್ಟಯ್ಯ ...ತರ ಅಸು ನೀಗಿದರು.

ಸಾವು ಬದುಕಿನೊಡನೆ ತೂಗೂಯ್ಯಾಲೆ ಆಡುತ್ತಿದ್ದ ಪುಟ್ಟಯ್ಯನಿಗೆ ಪ್ರಾಣ ಇದ್ದಾಗ,ಹಾಸನ ಜಿಲ್ಲಾ ದಲಿತ ಸಂಘರ್ಷ ಸಮಿತಿ ಸಂಚಾಲಕ ಚಂದ್ರಪ್ರಸಾದ್ ತ್ಯಾಗಿಯೊಡನೆ ಆಡಿದ ನುಡಿಗಳು ಈಗ ಪುಟ್ಟಯ್ಯನಾಗಿನಿಂತು ನುಡಿಯುತ್ತ ನಡುಗಿಸುತ್ತಿವೆ. ಆಗ ಪುಟ್ಟಯ್ಯನ ಬಲಿಷ್ಠ ದೇಹದಲ್ಲಿ ಜೀವಇತ್ತು. ಆ 30 ವರ್ಷದ ದೇಹದ ಚಿಂತನವು ಸಾವಿನ ನೆರಳಲ್ಲಿ ಈ ರೀತಿ ಇದೆ :

**ದೇವನೂರ ಮಹದೇವ**

"ನೋಡಿ ಸಾರ್,ನಾವು ದಲಿತರು ಇದುವರೆಗೂ ಯಾರಿಗೂ ಬಗ್ಗಿರಲಿಲ್ಲ. ಒಕ್ಕಲಿಗರು ಲಿಂಗಾಯಿತರಿಂದ ಒಂದು ಏಟನ್ನೂ ತಿಂದಿರಲಿಲ್ಲ.ಯಾಕೆಂದರೆ ಹಿಂದೆ ನಮಗೆ ಹೊಡೆಯಲುಒಬ್ಬ ಇಬ್ಬ ಮೇಲ್ಜಾತಿಯವ ಬರುತ್ತಿದ್ದ. ಆದರೆ ಈಗ ರೈತ ಸಂಘ ಆದ ಮೇಲೆ ಒಕ್ಕಲಿಗರು ಲಿಂಗಾಯಿತರು ಗುಂಪುಗೂಡಿ ಹೊಡೆಯಲು ಬರುತ್ತಿದ್ದಾರೆ. ಇದನ್ನು ಎದುರಿಸುವುದು ಕಷ್ಟ."

ಮೇಲಿನ ಮಾತು ಅಗ್ನಿಯಂಥ ವಾಸ್ತವವಾಗಿದೆ. ಹಳ್ಳಿಗಾಡ ರೈತ ಸಂಘದ ವಾಸ್ತವ ಏನು ಎಂದು ಹೇಳಿದೆ. ಈ ವಾಸ್ತವದಲ್ಲಿ ದಲಿತ ಸಂಘರ್ಷ ಸಮಿತಿ ಏನಾಗಬೇಕು, ಹೇಗಾಗಬೇಕು, ಎಂದು ನುಡಿಯುತ್ತಿದೆ.

ಹಳ್ಳಿಗಾಡ ಮಧ್ಯಮ ಜಾತಿ ಗುಂಪು ತನ್ನ ಪುಂಡಾಟಿಕೆ ಜಾತಿಯತಿಗೆ ರೈತಸಂಘವನ್ನು ಬಳಸಿಕೊಳ್ಳುವುದು ಸಹಜವೇ. ಮಧ್ಯಮ ಜಾತಿಯ ಹಿತಾಸಕ್ತಿಯಲ್ಲಿ ರೈತಸಂಘವು ಕುಬ್ಜವಾಗುವುದು ಅನೈತಿಕವಾಗುವುದು ಸಹಜವೇ. ರಾಜ್ಯ ನಾಯಕತ್ವವೂ ಈ ಗುಂಪಿನ ಮುಂದೆ ತನ್ನ ನಾಯಕತ್ವದ ಉಳುವಿಗೆ ಅಸಹಾಯಕವಾಗುವುದೂ ಸಹಜವೇ.

ಇದು ಪರಿಸ್ಥಿತಿ.ರೈತ ಸಂಘವು ಒಂದು ಗುಂಪೇ ಹೊರತು ಒಂದು ಸಂಘಟನೆಯಲ್ಲ. ಈ ಪರಿಸ್ಥಿತಿಯಲ್ಲಿ ರೈತ ಸಂಘದ ಬಗ್ಗೆ ಆಸೆಗಣ್ಣಿನಿಂದ ದಲಿತರು ನೋಡಿದರೆ ದಲಿತರು ತಮ್ಮ ಕಣ್ಣುಗಳನ್ನು ಬಲಿಕೊಡಬೇಕಾತ್ತದೆ.

ದಲಿತರ ಬಲಿ ಈ ನೆಲಕ್ಕೆ ಇನ್ನೂ ಎಷ್ಟು ಬೇಕು ? ಸಾಕು. ಸಂಘರ್ಷ ಸಮಿತಿ ತನ್ನ ಸ್ವರೂಪ ಬದಲಿಸಿಕೊಳ್ಳದಿದ್ದರೆ ಇನ್ನೂ ಬಲಿಕೊಡಿಸುವುದಕ್ಕೆ ತಾನೂ ಕಾರಣವಾಗುತ್ತದೆ. ಅದಕ್ಕೆ ಇಂದೇ ಅದು ತನ್ನ ಸ್ವರೂಪ ಬದಲಿಸಿಕೊಳ್ಳಬೇಕಾಗಿದೆ. ದಸಂಸ

(ಕೊನೆಯ ಪುಟಕ್ಕೆ

ಕೊಡುಗೆ : ಶ್ರೀ ದೇವನೂರ ಮಹಾದೇವ ದಿನಾಂಕ 23.06.2006

# ಎಲ್ಲ ಜ್ಞಾನಕ್ಕೂ ಮೂಲ ಅಕ್ಷರ ಜ್ಞಾನ, ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದು ಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ:

1. ಕಡ್ಡಾಯ ಪ್ರಾಥಮಿಕ ಶಿಕ್ಷಣ.
2. ವಯಸ್ಕರ ಶಿಕ್ಷಣ.

ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು ಪೋಷಕರ ಪ್ರಥಮ ಕರ್ತವ್ಯ.

ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ 15 ರಿಂದ 35 ವರ್ಷದೊಳಗಿನ ವಯಸ್ಕರಿಗೆ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯವಿದೆ. ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

ಮಾನವನ ಬದುಕಿಗೆ ಅಕ್ಷರ ಜ್ಞಾನ ಅತ್ಯಂತ ಅಗತ್ಯ, ಅದನ್ನು ತಪ್ಪದೆ ಸಂಪಾದಿಸಿ ಕೊಳ್ಳಿ.

# ದಲಿತರ ಪಾಲಿಗೆ ಭೀಕರಗೊಳ್ಳುತ್ತಿರುವ ಹಾಸನ ಜಿಲ್ಲೆ

ಾಸನ ತಾಲ್ಲೂಕು ದುದ್ದ ಹೋಬಳಿ, ಕಮ್ಮರಿ
ಗ್ರಾಮದಲ್ಲಿ ತಾರೀಖು : 3–7–84ರ ಮಂಗ
ರ ಬೆಳಿಗ್ಗೆ 8–00 ಘಂಟೆಯಲ್ಲಿ ಗ್ರಾಮದ
ಲಿಗ ಜಾತಿಯ ಕೆಲವರು ಪೂರ್ವಯೋಜಿತ
ತರಾಗಿ ಆದಿ ಕರ್ನಾಟಕ ಜಾತಿಯ ಶಂಭಯ್ಯ,
ಜಮೀನಿಗೆ ಹಾಕಿದ್ದ 110 ತೆಂಗಿನ ಗಿಡಗಳ
ಕಿತ್ತು ತೆಗೆದುಕೊಂಡು ಹೋಗಿದ್ದಾರೆ. ವಿಷಯ
ು ಹೊಲದ ಹತ್ತಿರ ನೋಡಲು ಹೋದಾಗ
ುಯಲ್ಲಿ ಶಂಭಯ್ಯನವರ ಬಲಗಾಲನ್ನು ಮುರಿ
ಹಾಕಿದ್ದಾರೆ. ಸುಮಾರು 60 ವರ್ಷದ
ಡ್ಡಯ್ಯ ಎಂಬ ಮುದುಕನಿಗೆ ಎರಡು ಕಾಲು
ನ್ನು ಕಲ್ಲಿನಿಂದ ಜಜ್ಜಿ ತಿರುಗಾಡದಂತೆ ಮಾಡಿ
ರೆ. ಜವರಯ್ಯ, ಸಣ್ಣಯ್ಯ, ವೈರಮುಡಯ್ಯ,
ದೆ ನಿಂಗರಾಜಮ್ಮ ಮತ್ತು ದ್ಯಾವಮ್ಮ ಇವರ
ಲೆ ಹಲ್ಲೆ ನಡೆಸಲಾಗಿದೆ. ಹಲ್ಲೆಗೊಳಗಾದ
ತ ಜನರು ಪೆಟ್ಟು ತಡೆಯಲಾರದೆ ಹಲ್ಲೆಕೋರ
ಕೈಕಾಲು ಹಿಡಿದುಕೊಂಡು ಪ್ರಾಣವನ್ನು
ಳಿಸಿಕೊಂಡಿದ್ದಾರೆ. ಈಗ ಹಾಸನದ ಸರ್ಕಾರಿ
ಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ.
ಭಯ್ಯ, ನಾಗಮ್ಮ, ನಿಂಗರಾಜಮ್ಮ ಇವರು
ು ಸರ್ಕಾರದ ಗೋಮಾಳದ ಜಮೀನನ್ನು
ರ್ ಸಾಗುವಳಿ ಮಾಡುತ್ತಿರುದ್ದನ್ನು ಸಹಿಸದ
ಲ್ಲೆಕೋರರು, ದೌರ್ಜನ್ಯ ನಡೆಸಲು ಒಂದು
ನೆಲೆಯಾಗಿರುತ್ತದೆ.

**ನೆಗೂ ನುಗ್ಗಿ ದರೋಡೆ**

ಹಲ್ಲೆಕೋರರು ಒಂಬತ್ತು ದಲಿತ
ುಟುಂಬಗಳಿಗೆ ಅವರುಗಳ ಮನೆಗಳಿಗೆ
ಗ್ಗಿ ನೀರು ತುಂಬಿದ ಕಡಾಯಗಳು, ಹಿತ್ತಾಳೆ
ಪ್ಪಲಿಗಳು, ಅಡಿಗೆ ಪಾತ್ರೆಗಳು, ಊಟ ಮಾಡು
ತಟ್ಟೆಗಳು, ಲೋಟಗಳು, ಚಮಚೆಗಳು, ರಾಗಿ, ಹುರಳಿಕಾಳು, ಕೈಗಡಿಯಾರಗಳು, ಚಿನ್ನದ ಒಡವೆಗಳು, ಸೀರೆಗಳು, ನಗದು ಹಣ, ಬೈಸಿಕಲ್, ಚಿನ್ನದ ಚೈನು ಪೀಸುಗಳು, ಮಾಂಗಲ್ಯ ಸಮೇತ ಕಿತ್ತುಕೊಂಡು ಅಮಾನುಷವಾಗಿ ದರೋಡೆ ಮಾಡಿದ್ದಾರೆ.

ಬೆಳಿಗ್ಗೆ 8 ಘಂಟೆಯಲ್ಲಿ ಹಲ್ಲೆಗೊಳಗಾದ ಜನ ಆಸ್ಪತ್ರೆಗೆ ಹೋಗಲು ಅವಕಾಶ ನೀಡದೆ ಪೋಲೀಸ್ ಠಾಣೆಗೆ ತಿಳಿಸಿದರೆ ನಿಮ್ಮನ್ನೇ ಮುಗಿಸುತ್ತೇವೆ, ಎಂದು ಕೊಲೆ ಬೆದರಿಕೆ ಹಾಕಿ, ದಾರಿಯನ್ನು ಅಡ್ಡಗಟ್ಟಿದ್ದಾರೆ. ಹಲ್ಲೆಕೋರರು ಕಣ್ಣುತಪ್ಪಿಸಿಕೊಂಡು

## ಪ್ರತ್ಯಕ್ಷ ವರದಿ

ಊರಿನಿಂದ ಓಡಿ ಬಂದ 12ವರ್ಷದ ಇಬ್ಬರು ಮಕ್ಕಳು ವಿಷಯ ತಿಳಿಸಿದಾಗ, ದಲಿತ ಸಂಘರ್ಷ ಸಮಿತಿಯಿಂದ ಪೋಲೀಸ್ ಅಧಿಕಾರಿಗಳಿಗೆ ಫೋನ್ ಮೂಲಕ ವಿಷಯ ತಿಳಿಸಲಾಯಿತು.

**ಎಲ್ಲ ಮನೆಗಳ ಬಾಗಿಲೂ ತೆರೆದಿವೆ**

ಇಂತಹ ರಾಕ್ಷಸಿ ಪ್ರವೃತ್ತಿಯ, ಹಲ್ಲೆಕೋರರ ಮಧ್ಯೆ ಪ್ರಾಣಿಗಳಿಗೂ ಕೀಳಾಗಿ ಬದುಕುತ್ತಿರುವ ಅಸ್ಪೃಶ್ಯರಾದ ದಲಿತರು ತಮ್ಮ ಆಸ್ತಿ, ಮಾನ ಪ್ರಾಣ ಉಳಿಸಿಕೊಳ್ಳುವುದೇ ದುಷ್ಕರವಾಗಿದೆ. ದಲಿತರ 9 ಕುಟುಂಬಗಳಲ್ಲಿರುವ ಎಲ್ಲಾ ಗಂಡಸರೂ ಆಸ್ಪತ್ರೆಯಲ್ಲಿದ್ದು, ಕೆಲವು ಹೆಂಗಸರು ಒಂದು ತಿಂಗಳ ಬಾಣಂತಿ ಜಯಮ್ಮನ ಸಮೇತ ತಮ್ಮ ಪ್ರಾಣ ಉಳಿಸಿಕೊಳ್ಳಲು ನೆರೆಊರುಗಳಿಗೆ ಹೋಗಿದ್ದಾರೆ. ಗ್ರಾಮದಲ್ಲಿ ದಲಿತರ ಎಲ್ಲಾ ಮನೆ ಬಾಗಿಲುಗಳೂ ತೆರೆದಿವೆ. ಅಲ್ಲಿ ಬಾಗಿಲಲ್ಲಿ ಕುಳಿತಿದ್ದ, 3–4ಮುದ್ದುಕಿಯರು 5-6 ಚಿಕ್ಕ ಮಕ್ಕಳು ತಮ್ಮ ಪ್ರಾಣಗಳ ಆಸೆ ತೊರೆದು ಖಾಲಿ ಮನೆಗಳನ್ನು ಕಾದು ಕುಳಿತು ಕಾಲೋನಿಗೆ ಯಾರಾದರೂ ಭೇಟಿಯಾದ ತಕ್ಷಣ ಗೋಳೋ ಎಂದು ಕಣ್ಣೀರು ಸುರಿಸಿ, ನಮ್ಮನ್ನು ಕಾಪಾಡಿ ಎಂದು ಕಾಲು ಹಿಡಿದುಕೊಳ್ಳುವ ದೃಶ್ಯ ಕರಳು ಕಿತ್ತುಬಂದಂತಾಗುತ್ತದೆ. ಊಟಕ್ಕೆ ವ್ಯವಸ್ಥೆ ಇಲ್ಲದ ಜನರಿಗೆ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಪುರಿ ಕಡಲೆ ಒದಗಿಸಿದ್ದಾರೆ.

**ಪೋಲಿಸ್ ಬೆಂಬಲ ಯಾರಿಗೆ ?**

ಈ ಘಟನೆ ನಂತರ ಜಿಲ್ಲಾಪೋಲೀಸ್ ಅಧಿಕಾರಿಗಳು,ಸ್ಥಳಕ್ಕೆ ಭೇಟಿನೀಡಿದ್ದರೂ ಸ್ಥಳೀಯ ಪೋಲೀಸ್ ಈ ಎಲ್ಲಾ ಅಮಾನವೀಯ ದೌರ್ಜನ್ಯ, ದರೋಡೆ, ಶಂಭಯ್ಯನವರ ಕೊಲೆಯ ಯತ್ನ, ಅಸ್ಪೃಶ್ಯತೆ ಆಚರಣೆಗೆ ಸಂಬಂಧಿಸಿದ ಯಾವುದೇ ಬಗ್ಗೆ ಕೇಸುಗಳನ್ನು ದಾಖಲು ಮಾಡದೆ, ಕ್ರೂರಿಗಳು ಸುಲಭವಾಗಿ ನುಣುಚಿಕೊಳ್ಳುವಸಾಮಾನ್ಯ ಕೇಸುಗಳನ್ನು ನೆಪಮಾತ್ರಕ್ಕೆದಾಖಲು ಮಾಡಿದ್ದು, ದುಷ್ಟರನ್ನು ಬಂಧನ ಮಾಡುವ ಯಾವುದೇ ಕಠಿಣ ಕ್ರಮ ತೆಗೆದುಕೊಳ್ಳದೇ ಹಲ್ಲೆಕೋರರ ಮೇಲೆ ಮುಲಾಜು ತೋರಿಸುವ ಪೋಲೀಸ್ ಅಧಿಕಾರಿಯ ವರ್ತನೆ ನೋಡಿರೆ ರಾಜಕೀಯ ಬೆಂಬಲದ ಅನುಮಾನ ಕಂಡು ಬರುತ್ತದೆ.

ಬಹುಸಂಖ್ಯಾತ ಕೋಮಿನ ಜನರು ದಲಿತರ ಮೇಲೆ ಪ್ರಾಣಿಗಳಿಗಿಂತಲೂ ಕೀಳಾಗಿ, ಅಮಾನುಷ ದೌರ್ಜನ್ಯಗಳ ನಡೆಸುತ್ತಿದ್ದು ದಲಿತರ ಬದುಕು ಅಪಾಯದ ಅಂಚಿನಲ್ಲಿದೆ. ಇಷ್ಟಾಗಿಯೂ ಸರ್ಕಾರ ಕಣ್ಣುಮುಚ್ಚಿ ಕುಳಿತಿದೆ.

# ...ತುಲ್ಲಾಗಿ ಬೆಳೆಯುತ್ತಿರುವ ರೈತಸಂಘದ ಬೆಳೆಯ ಬಗೆ

ಜಾತಿಯಾಗಿ ಒಡೆದು ಬಡತನವಾಗೂ ಸೇರದೆ,
ವು ಅಸ್ಪೃಶ್ಯತೆ ಮೂಢನಂಬಿಕೆಗಳ ದವಡೆಯಲ್ಲಿ
ವ ಗ್ರಾಮ ಇಂದು ಬೀದೀಲಿ ಬಿದ್ದಿದೆ. ಇಂಥ
ಮವನ್ನು ಒಟ್ಟುಗೂಡಿಸಿ ಅದಕ್ಕೆ ಜೀವದುಂಬ
ಸಾಧ್ಯತೆ ಇರುವ ರೈತ ಸಂಘವು ತನ್ನ ಮಧ್ಯ
ಜಾತಿ ಹಿತಾಸಕ್ತಿಯನ್ನು ಕಾಯ್ದು ಸಲುವಾಗಿ
ರಾದ ಗ್ರಾಮವನ್ನು ಮತ್ತೂ ಧೂಳಿಪಟ
ಾಡುತ್ತಿದೆ. ಸಮಾಜವಾದಿ ನಾಯಕತ್ವ ಇದ್ದೂ ಹಳ್ಳಿಗೆ ಬಂದರೆ ಕುರುಡಾಗುವ ರೈತಸಂಘವು ದಲಿತ ವಿರೋಧಿಯಾಗುತ್ತ ಬೆಂಕಿಕೆಂಡವನ್ನು ತನ್ನ ಸೆರಗಿಗೆ ಕಟ್ಟಿಕೊಳ್ಳುತ್ತಿದೆ. ಹಾಸನ ಜಿಲ್ಲೆಯಲ್ಲಿನ ರೈತ ಸಂಘವು ತನ್ನ ತಲೆಬೋಳಿಸಿಕೊಂಡು ತಾನೇ ಮೂರು ನಾಮ ಹಾಕಿಕೊಂಡಿರುವ ಅನೈತಿಕ ಉದಾಹರಣೆಗಳು ಇಂತಿವೆ:

1. ಬೇಲೂರು ತಾಲ್ಲೂಕು ಸುಲಗಳಲೆಗ್ರಾಮದ ದಲಿತರು ರೈತಸಂಘಕ್ಕೆ ಸೇರದೆ ಅಂಬೇಡ್ಕರ್ ಜಯಂತಿ ಆಚರಿಸಿದ್ದಕ್ಕೆ ರೈತ ಸಂಘದವರು ದಲಿತರ ಮೇಲೆ ಹಲ್ಲೆ ನಡೆಸಿದ್ದಾರೆ.

2. ದುದ್ದ ಹೋಬಳಿ ಕಮ್ಮರಿಗೆ ಗ್ರಾಮದ ದಲಿತರ ಮೇಲೆ ಹಲ್ಲೆ ಮಾಡಿ ಆಸ್ತಿ ದರೋಡೆ ನಡೆಸಿದ ಪುಂಡರ ಗುಂಪನ್ನು ನ್ಯಾಯಾಲಯದಿಂದ ಬಿಡುಗಡೆ ಮಾಡಿಸಲು ದುದ್ದ ಹೋಬಳಿ ರೈತ ಸಂಘದ ಅಧ್ಯಕ್ಷ ಪ್ರಯತ್ನಿಸಿದ್ದಾನೆ.

(ಕೊನೆಯ ಪುಟಕ್ಕೆ)

# ಮಾರೀಚ ಮಾಯೆ– ಚಿನ್ನದ ಜಿಂಕೆ




## ವಿಶ್ಲೇಷಣೆ–೪

ಅರಣ್ಯ ಕಾಂಡದಲ್ಲಿ ಸೀತಾಪಹರಣದ ಸಂದರ್ಭ ಬಹಳ ಮುಖ್ಯ ಹಾಗೂ ಮಹತ್ವಪೂರ್ಣ ಘಟನೆಯಾಗಿದೆ. ಅದೇ 'ರಾಮಾಯಣ'ದ ಕೇಂದ್ರ ; ಮತ್ತು ಅದು ರಾಮಾಯಣದ 'ಕ್ರಿಯೆ' ಮುಂದುವರಿಯಲು ಅನಿವಾರ್ಯವಾದದ್ದೂ ಆಗಿದೆ. ಸೀತೆ, ಕಾಂಚನ ಮೃಗವನ್ನು ಕಂಡು ಬಯಸಿದಲ್ಲಿನಿಂದ ಹಿಡಿದು, ರಾವಣ, ಸೀತೆಯನ್ನು ಅಪಹರಿಸಿ ಲಂಕಾಪಟ್ಟಣಕೊಯ್ಯುವಲ್ಲಿವರೆಗಿನ ಘಟನೆಯನ್ನು ರಾಮಾಯಣ ಅದ್ಭುತವಾಗಿ ಸೃಷ್ಟಿಸುತ್ತದೆ. ಇದಕ್ಕೆ ಸಮಾನವಾದ ಇನ್ನೊಂದು ಸಂದರ್ಭ ಜಗತ್ತಿನ ಯಾವ ಸಾಹಿತ್ಯದಲ್ಲೂ ದೊರಕುವುದಿಲ್ಲ. ಈ ಸಂದರ್ಭವನ್ನು ಸೂಕ್ಷ್ಮವಾಗಿ ವಿಶ್ಲೇಷಣೆ ಮಾಡುವುದಕ್ಕೆ ಮೊದಲು, ಅದು ವಾಲ್ಮೀಕಿ ರಾಮಾಯಣದಲ್ಲಿ ಹೇಗೆ ಚಿತ್ರಿತವಾಗಿದೆಯೆನ್ನುವುದನ್ನು ಗಮನಿಸೋಣ: ಮೃಗವಾಗಿ ಮಾರೀಚನು ರಾಮನ ಆಶ್ರಮದ್ವಾರದಲ್ಲಿ ಸಂಚರಿಸತೊಡಗುತ್ತಾನೆ ; ವಾಲ್ಮೀಕಿಯ ಜಿಂಕೆಯ ವರ್ಣನೆಯನ್ನು ಗಮನಿಸಿ: ಮಾರೀಚನು, ಮಹತ್‌ಮೃಗದ ರೂಪವನ್ನು ಧರಿಸಿ, ಇಂದ್ರ ನೀಲಮಣಿಗಳಂತಹ ಕೊಂಬುಗಳ ತುದಿಯುಳ್ಳವನಾಗಿಯೂ, ಬಿಳುಪು ಕಪ್ಪಿನಿಂದ ಕೂಡಿದ ಮುಖಾಕೃತಿಯುಳ್ಳವನಾಗಿಯೂ, ಕೆಂಪು ಪದ್ಮದಂಥ ಮುಖ ಕಾಂತಿ, ಮತ್ತು ಇಂದ್ರನೀಲ ಮಣಿಗಳಂತ ಕಪ್ಪಾದ ನೈದಿಲೆಯಂತಹ ಕಿವಿಗಳುಳ್ಳವನಾಗಿಯೂ ಕೊಂಚ ಎತ್ತಿದ ಕತ್ತುಳ್ಳವನಾಗಿ ಮತ್ತು ಮೇಲೆ ಕೆಂದಾವರೆಯಂತಹ ಬಣ್ಣವುಳ್ಳದ್ದೂ ಕೆಳಭಾಗದಲ್ಲಿ ಕನ್ನೈದಿಲೆಯ ವರ್ಣವುಳ್ಳದ್ದೂ ಆದ ಮೇಲು ಮತ್ತು ಕೆಳತುಟಿಗಳುಳ್ಳದ್ದೂ ಆಗಿ ಇದ್ದನು. ಹೊಳೆಯುತ್ತಿರುವ ಉದರವು ಮಲ್ಲಿಗೆ ಚಂದ್ರ ವಜ್ರಾಯುಧಕ್ಕೆ ಸಮಾನವಾದ ಕಾಂತಿಯುಳ್ಳದ್ದಾಗಿತ್ತು. ಒಂದು ಪಕ್ಕ ಹಿಪ್ಪೆ ಹೂವಿನವರ್ಣದಿಂದ ಕೂಡಿತ್ತು;ಇನ್ನೊಂದು ಪಕ್ಕ ಕಮಲಕೇಸರದ ವರ್ಣವನ್ನು ಹೊಂದಿತ್ತು : ವೈಡೂರ್ಯ ಮಣಿಗಳಿಗೆ ಸಮಾನವಾದ ಗೊರಸಗಳು, ಸೂಕ್ಷ್ಮವಾದ ಜಂಘೆಗಳು ; ಮತ್ತೆ ಒಂದಕ್ಕೊಂದು ಸುಸಂಗತವಾದ ಸಂದಿಬಂಧಗಳುಳ್ಳದ್ದೂ, ಆಗಿರುವ, ಇಂದ್ರಾಯುಧದ ಕಾಂತಿಯುಳ್ಳ ಮೇಲಕ್ಕೆ ನೆಗಹಿದ ಬಾಲವುಳ್ಳದ್ದೂ ಆಗಿರುವ, ಮಿಂಚುತ್ತಿರುವ ವರ್ಣದಿಂದ ಕೂಡಿದ, ರತ್ನಗಳಿಂದ ಕೆತ್ತಿದ್ದ, ಮೃಗರೂಪವಾಗಿ ಮಾರೀಚನು, ಒಂದು ಕ್ಷಣಮಾತ್ರದಲ್ಲಿ, ಅರಣ್ಯವನ್ನು ಪ್ರಜ್ವಲಿಸುತ್ತಾ. ರಾಮಾಶ್ರಮದ ಮುಂದೆ ನಿಂತನು. ಆ ರಾಕ್ಷಸನು ವೈದೇಹಿಯನ್ನು ಪ್ರಲೋಭನ ಗೊಳಿಸುವುದಕ್ಕಾಗಿ, ಮನೋಹರವೂ ದರ್ಶನೀಯವೂ ಆದ ಜಿಂಕೆಯ ರೂಪದಲ್ಲಿ, ಹುಲ್ಲನ್ನು ಮೆಲ್ಲುತ್ತಾ ಹೊರಟನು; ವಿಚಿತ್ರ ವರ್ಣವುಳ್ಳ, ಪ್ರಿಯದರ್ಶನವುಳ್ಳ, ಕಮಲಗಳಂತೆ ವಿಚಿತ್ರವಾದ ಪೃಷ್ಠ ಭಾಗವುಳ್ಳ ಆ ಮಹಾಮೃಗವು ರಾಮನ ಆಶ್ರಮ ಪ್ರದೇಶದಲ್ಲಿ ಸಂಚರಿಸುತ್ತಿದ್ದನು ; ಅತ್ತ ಇತ್ತ ಚಲಿಸುತ್ತ, ಒಮ್ಮೆ ನಿಲ್ಲುತ್ತಾ, ಒಮ್ಮೆ ಓಡುತ್ತಾ, ಮೃಗಗಳು ಅನುಸರಿಸುತ್ತಿರಲು, ಮಾರೀಚನು ಮೃಗರೂಪವನ್ನು ಹೊಂದಿದವನಾಗಿ, ಸೀತೆಯ ದರ್ಶನವನ್ನು ಅಪೇಕ್ಷಿಸುತ್ತಾ, ತಿರುಗುತ್ತಾ, ಆಶ್ರಮದ ಬಾಗಿಲಿಗೆ ಬಂದು ಹೋಗುತ್ತಾ ಪರಿಭ್ರಮಿಸುತ್ತಿದ್ದನು. ಆ ರಾಕ್ಷಸನು, ವನದಲ್ಲಿ ಹುಟ್ಟಿದ ಆ ಮೃಗಗಳನ್ನು ಮೂಸಿನೋಡಿ, ಅವುಗಳನ್ನು ಕೊಲ್ಲಲು ಆಸಕ್ತನಾದರೂ, ತನ್ನಗುಟ್ಟು ಹೊರಬರದಿರಲೆಂದು, ಭಕ್ಷಿಸದೆ ಇದ್ದನು.

ಅದೇ ಕಾಲಕ್ಕೆ ಶುಭಲೋಚನಳಾದ ವೈದೇಹಿಯು ಹೂವುಗಳನ್ನು ಕೊಯ್ಯುವುದರಲ್ಲಾಸಕ್ತಳಾಗಿ, ಗಿಡಗಳ ಬಳಿಗೆ ಹೊರಟಳು. ಮನೋಹರವಾದ ಮುಖವುಳ್ಳ, ಮದಿರೇಕ್ಷಣೆಯಾದ ಸೀತೆಯು, ಕರ್ಣಿಕಾರ, ಅಶೋಕ ವೃಕ್ಷಗಳನ್ನು, ಮಾವಿನ ಗಿಡಗಳನ್ನೂ ಕುರಿತು ಹೂವುಗಳಿಗಾಗಿ ಸಂಚರಿಸಿದಳು. ವನವಾಸಕ್ಕೆ ಅನರ್ಹಳಾದ, ಪರಮಾಂಗನೆಯಾದ ಸೀತೆಯು, ಮುಕ್ತಾಮಣಿಗಳಿಂದ ಕೂಡಿ ವಿಚಿತ್ರಾಂಗವುಳ್ಳ,ರತ್ನಮಯವಾದ ಆ ಮೃಗವನ್ನು ಕಂಡಳು. ರುಚಿರವಾದ ದಂತಗಳು ತುಟಿಗಳುಳ್ಳ ಸೀತೆಯು ವಿಸ್ಮಯದಿಂದ ಉತ್ಫುಲ್ಲವಾದ ಕಣ್ಣುಗಳಿಂದ ; ಬಿಳುಪು ಕೆಂಪು ಹಳದಿ ಬಣ್ಣದ ಧಾತುಗಳ ಕಾಂತಿಯಿಂದ ಕೂಡಿದ ರೋಮಗಳುಳ್ಳ ಆ ಮೃಗವನ್ನು ಸ್ನೇಹದಿಂದ ನೋಡಿದಳು. ಆ ಮಾಯಾ ಮೃಗವು ಆ ರಾಮದಯಿತೆಯನ್ನು ನೋಡುತ್ತಾ ಆ ವನವನ್ನು ದೀಪಿಸುತ್ತಾ ಸಂಚರಿಸಿತು. ಸೀತೆಯು ಅದೃಷ್ಟಪೂರ್ವ (ಹಿಂದೆ ಎಂದೂ ನೋಡದಿರುವ) ವಾದ ಅನೇಕ ಬಗೆಯ ರತ್ನಮಯವಾದ ಆ ಮೃಗವನ್ನು ನೋಡಿ ವಿಸ್ಮಯವನ್ನು ಹೊಂದಿದಳು: ಸುಂದರವಾದ ನಿತಂಬಗಳುಳ್ಳ, ಅನವದ್ಯಾಂಗಿ (ನಿರ್ದೋಷವಾದ ಶರೀರವುಳ್ಳ)ಯಾದ, ಶೋಧಿಸಿದ ಚಿನ್ನದ ವರ್ಣದವಳಾದ. ಸೀತೆಯು, ಚಿನ್ನ ಬೆಳ್ಳಿಗಳ ಕಾಂತಿವುಳ್ಳ ಪಕ್ಕಗಳುಳ್ಳ ಆ ಮೃಗವನ್ನು ಕಂಡು, ಸಂತೋಷದಿಂದ, ತನ್ನಗಂಡ (ಭರ್ತಾರ)ನನ್ನೂ ಸಾಯುಧನಾದ ಲಕ್ಷ್ಮಣನನ್ನೂ ಕೂಗಿ ಕರೆದಳು. ವೈದೇಹಿಯಿಂದ ಕರೆಯಲ್ಪಟ್ಟ ನರವ್ಯಾಘ್ರರಾದ ರಾಮಲಕ್ಷ್ಮಣರು ಬಂದು ಅತ್ತಿತ್ತ ನೋಡಿ ಆ ಮೃಗವನ್ನು ಕಂಡರು.

ಅನಂತರದ ಸಂಸ್ಕೃತ ಕಾವ್ಯಗಳಿಗೆ ಹೋಲಿಸಿದರೆ, ರಾಮಾಯಣ ಸರಳ ಶೈಲಿಯಲ್ಲಿ ರಚಿತವಾದ ಕಾವ್ಯವೆಂದೇ ಹೇಳಬೇಕು. ಇಲ್ಲಿ,ಉಕ್ತಿ ವೈಚಿತ್ರ್ಯಗಳ ಬಳಕೆ ಸಂದರ್ಭಕ್ಕೆ ತಕ್ಕಷ್ಟು; ಸಾಮಾನ್ಯವಾಗಿ ಸ್ವಭಾವೋಕ್ತಿಗಳಲ್ಲಿಯೆ ಕಾವ್ಯ–ಪರಿಣಾಮ; ಆದರೆ ಸೀತಾಪಹರಣದ ಸಂದರ್ಭದಲ್ಲಿ–ಮಾಯಾ ಮೃಗ, ಸೀತೆಯ ವರ್ಣನೆ ; ಮತ್ತು ರಾವಣ ಸೀತೆಯನ್ನು ಹೊತ್ತು ಆಕಾಶದಲ್ಲಿ ಚಲಿಸಿದ ಸಂದರ್ಭದ ವರ್ಣನೆ–ಅಲಂಕಾರಗಳನ್ನು ಹೇರಳವಾಗಿ ಬಳಸಿದ್ದಾನೆ, ವಾಲ್ಮೀಕಿ. ಕಾಂಚನಮೃಗದ ವರ್ಣನೆಯಲ್ಲಿ ಈ ಸಂದರ್ಭದಲ್ಲಿನ ಸೀತೆಯ ವರ್ಣನೆಯಲ್ಲಿ ಸಾಮ್ಯಗಳಿರುವುದು, ಕೇವಲ ಆಕಸ್ಮಿಕವಲ್ಲ. ಜಿಂಕೆಯ ವರ್ಣನೆಯಲ್ಲಿ, 'ಪ್ರಿಯದರ್ಶನ' 'ದರ್ಶನೀಯ', 'ಮನೋಹರ' 'ಸುಸಂಹತ' ರಾಜೀವ ಚಿತ್ರ ಪೃಷ್ಠ', ಇವು ಬಳಕೆಯಾಗಿದ್ದರೆ, ಸೀತೆ, 'ರುಚಿರಾನನೆ' 'ಮದಿರೇಕ್ಷಣೆ' 'ರುಚಿರ

(11 ನೇ ಪುಟಕ್ಕೆ)



# ಮಾನವೀಯತೆಯ ಪ್ರೀತಿಯ ಸಮಾಜ ನಿರ್ಮಾಣಕ್ಕಾಗಿ...

ಕರ್ನಾಟಕ ರಾಜ್ಯದಲ್ಲಿ ಕೆಲವು ಶ್ರೀಮಂತ ಜಿಲ್ಲೆಗಳಲ್ಲಿ ಒಂದಾದ ಮಂಡ್ಯ ಜಿಲ್ಲೆ ದಲಿತರ ಪಾಲಿಗೆ ನರಕಯಾತನೆಯ ಹೊಂದಿದ್ದು, ಹಾಡು ಹಗಲಲ್ಲೆ ದಲಿತ ಹೆಣ್ಣು ಮಕ್ಕಳು ಮಾನಭಂಗಕ್ಕೂ, ಅತ್ಯಾಚಾರಕ್ಕೂ, ಮಾನ ಮರ್ಯಾದೆ ಸೂಲ್ಲೆತ್ತಿದಾಗ ಉಳ್ಳವರ ಪುಂಡರುಗಳ ಚಾಕು ಚೂರಿಗಳಿಗೂ ತಲೆ ಕೊಟ್ಟು, ತನ್ನ ಪ್ರಾಚೀನದ ಬದುಕಿನಲ್ಲಿಯೇ ಸಾಗುವಂತೆ ಮಾಡಲಾಗುತ್ತಿದೆ.

ಈ ಎಲ್ಲಾ ನೋವು, ಹಿಂಸೆ, ಅನ್ಯಾಯ, ಅಸಮಾನತೆಗಳ ವಿರುದ್ಧ ದಸಂಸವು ನೈತಿಕವಾಗಿ ಮತ್ತು ಭೌತಿಕವಾದ ಹಿನ್ನಲೆಯೊಡನೆ, ಪ್ರತಿಘಟನಾ ಚಳುವಳಿಗಳನ್ನು, ಸತ್ಯಾಗ್ರಹಗಳನ್ನು ಮಾಡುತ್ತಾ ದಲಿತರಲ್ಲಿ ಜಾಗೃತಿ ಮೂಡಿಸುತ್ತಿರುವ ಸಂದರ್ಭದಲ್ಲಿ ಪಾಂಡವಪುರ ತಾಲ್ಲೂಕಿನಲ್ಲಿ ದಸಂಸವನ್ನು ಹುಟ್ಟಾಕುವುದರೊಂದಿಗೆ ಕಾರ್ಯಕರ್ತರ ತರಬೇತಿ ಶಿಬಿರವನ್ನು ಅಕ್ಟೋಬರ್ 12 ಮತ್ತು 13 ರಂದು ನಡೆಸಲಾಯಿತು.

ಶಿಬಿರವನ್ನು ಉದ್ಘಾಟಿಸಿದ ರೈತಸಂಘದ ಗೋವಿಂದೇಗೌಡರು ಗಾಂಧಿಯ ತತ್ವಗಳನ್ನು ಅನುಷ್ಠಾನಕ್ಕೆ ತರುವುದರ ಜೊತೆಯಲ್ಲಿ "ರೈತ ಸಂಘದವರಿಂದ ದಲಿತರಿಗೆ ಯಾವುದೇ ರೀತಿಯ ತೊಂದರೆಗಳಾದರೂ ಅಂತಹವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ಅನಿವಾರ್ಯವಿದೆ ಎಂದು ತಿಳಿಸಿದರು.

"ದಲಿತ ಚಳುವಳಿಯಲ್ಲಿ ವಿದ್ಯಾರ್ಥಿಗಳ ಪಾತ್ರ" ವಿಷಯದ ಬಗ್ಗೆ ಮುಳ್ಳೂರು ನಾಗರಾಜ್‌ರವರು ವಿಶ್ಲೇಶಿಸುತ್ತಾ, ಜಾತಿಗೆ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವಿದೆ. ಇದು ಕ್ರೂರ, ಅಮಾನುಷ, ಅಸ್ಪೃಶ್ಯತೆ ಇಂಡಿಯಾದ ಕಳಂಕ. ಅಸ್ಪೃಶ್ಯನ ಹೋರಾಟ ಮೂಲಭೂತವಾದುದು, ಅನಿವಾರ್ಯವಾದುದು. ರಾಮನಕಾಲದ ರಾಜ್ಯದ ಬಗ್ಗೆ ವಿವರಿಸುತ್ತ ಅಸ್ಪೃಶ್ಯ ಶಂಭೂಕ ತಪಸ್ಸನ್ನಾಚರಿಸಲು ಬ್ರಾಹ್ಮಣರನ್ನು ಅನುಕರಿಸಿದಾಗ ಕುತಂತ್ರದಿಂದ ರಾಮನಿಂದ ಕೊಲೆಯಾದುದನ್ನು ಉದಾಹರಿಸಿದ ನಾಗರಾಜರು ಇದೊಂದು ಮಹಾಅನ್ಯಾಯ, ಸಮಾನತೆಯನ್ನು ಬಯಸದ, ಮನುಷ್ಯ ಮನುಷ್ಯನನ್ನು ಪ್ರೀತಿಸದ ಸಂಸ್ಕೃತಿ ಎಂದರು.

ದಲಿತ ಸಂಘಟನೆ ಮನುಷ್ಯನ 'ವಿಕಾಸಸ್ಥಿತಿ'. ಸಾಮಾಜಿಕ ಪ್ರಜ್ಞೆ, ಅಂತರಜಾತಿ ವಿವಾಹ, ವೈಚಾರಿಕತೆಯ ದೃಷ್ಟಿ, ಸಮಗ್ರವಾದ ಹೋರಾಟಗಳಿಂದ, ಅಂಬೇಡ್ಕರರ ಚಿಂತನೆಯಲ್ಲಿ ದಲಿತರನ್ನು ಜಾಗೃತಗೊಳಿಸುವ ಮನೋಭಾವನೆಯನ್ನು ಬೆಳೆಸಿಕೊಳ್ಳಬೇಕೆಂದು ವಿದ್ಯಾರ್ಥಿಗಳಿಗೆ ತಿಳಿಸಿದರು.

'ದಸಂಸದ ತಾತ್ವಿಕ ಹಿನ್ನಲೆ'ಯ ಬಗ್ಗೆ ಹುಲ್ಕೆರೆ ಮಾದೇವುರವರು, ಅವೈಜ್ಞಾನಿಕ ಚರಿತ್ರೆಗಳೇ ಈ ಧರ್ಮದ ದುರಂತ. ಜಾತಿ ಇಂಡಿಯವನ್ನು ಆಳುತ್ತಿದೆ. ಜಾತಿ ಹಳ್ಳಿಗಳಲ್ಲಿ ವ್ಯಾಪಕವಾಗಿದ್ದು ದಲಿತರ ಬದುಕನ್ನು ಛಿದ್ರಗೊಳಿಸಿರುವಾಗ ಗಾಂಧಿಯ ಗ್ರಾಮಸ್ವರಾಜ್ಯ, ವಿಕೇಂದ್ರಿಕರಣ ಉಳ್ಳವರ ಕೈಗೆ ಅಧಿಕಾರ ನೀಡುತ್ತದೆ. ಗಾಂಧಿಯವರ ಛಲಿಸಿಕೊಳ್ಳುವ ಮತ್ತು ಒತ್ತಾಯಿಸುವ, ಎರಡು ಕ್ರಮಗಳೂ ವಿಫಲವಾಗಿದ್ದು ಇಡೀವ್ಯವಸ್ಥೆ ಹಿಂಸೆಯಿಂದ ಕೂಡಿದೆ. ದಲಿತರಿಗೆ 'ಮನೋಬಲ' ಸಂಕಲ್ಪಶಕ್ತಿ' ಅನಿವಾರ್ಯವಾಗಿವೆ. ''ನಮ್ಮ, ಸ್ವಾತಂತ್ರದ ಬಗ್ಗೆ ನಿಮಗೆ ತಿಳಿದುಕೊಳ್ಳಲಾಗದಿದ್ದರೇ, ನಮಗೆ ಹೇಗೆ ತಿಳಿಸಿಕೊಡಬೇಕೆಂದು ಗೊತ್ತಿದೆ ನಾವು ತಿಳಿಸೇ ತೀರುತ್ತೇವೆ" ಎನ್ನುವ ಕರಿಯರ ನಾಯಕ ಮಾರ್ಟಿನ್ ಲೂಥರ್ ಕಿಂಗ್‌ನ ಮಾತುಗಳನ್ನ ಅಳವಡಿಸಕೊಳ್ಳಬೇಕಾಗಿದೆ. ವ್ಯಕ್ತಿ ಮತ್ತು ಸಮಾಜ ಎರಡೂ ಒಳಗೊಂಡಂತೆ ನಾವು ಸಮಗ್ರ ಬದಲಾವಣೆಯನ್ನು ತರಬೇಕಾಗಿದೆ. ಬ್ರಿಟಿಷರ ಪ್ರವೇಶದಿಂದ ಬೃಹತ್ ಬದಲಾವಣೆ ಕಂಡ ಭಾರತದಲ್ಲಿ ಎಡ ಪಂಥೀಯ ಎನ್ನುವ ಕಮ್ಯೂನಿಸ್ಟರು ಕೂಡ ಜಾತಿಯನ್ನು ತಂತ್ರವಾಗಿಬಳಸಿಕೊಂಡಿದ್ದಾರೆ ಎಂದು ವಿವರಿಸಿದ ಮಹದೇವುರವರು ವೈಜ್ಞಾನಿಕವಾಗಿ, ಮಾನವೀಯತೆಯಿಂದ, ಕ್ರಾಂತಿಕಾರಿಯಾಗಿ ಚಾರಿತ್ರಿಕ ಘಟಕನೆಗಳನ್ನು ಅವಲೋಕಿಸಿ ಹೋರಾಡಬೇಕಾಗಿದೆ, ಎಂದು ತಿಳಿಸಿದರು.

## ದಲಿತ ಸಂಘರ್ಷಸಮಿತಿ ಶಿಬಿರದ ವರದಿ

**ನಂಜುಂಡಮೂರ್ತಿ**

ಎರಡನೇ ದಿನದ ಶಿಬಿರವನ್ನು ಉದ್ಘಾಟಿಸಿದ ಶ್ರೀಮತಿ ಹೆಚ್. ಪಾರ್ವತಮ್ಮನವರು ದಸಂಸದಂತಹ ಸಂಘಟನೆ ಸಕ್ರಿಯವಾಗಿ ಕಾರ್ಯನಿರ್ವಹಿಸಬೇಕಾಗಿದೆ. ಫ್ರಾನ್ಸಿನ ಕ್ರಾಂತಿಯ ಸಹೋದರತೆ, ಸಮಾನತೆ ಸ್ವಾತಂತ್ರದ ಬಗ್ಗೆ ವಿವರಿಸಿ ನಮ್ಮ ಚಳುವಳಿಯನ್ನು ಈ ಮಾರ್ಗದಲ್ಲಿ ಕೊಂಡೊಯ್ಯಬೇಕೆಂದರು. ರಾಜಕೀಯ ಪಕ್ಷಗಳು ಭಾಷಣ ಬೊಗಳೆಗಳೊಂದಿಗೆ ಅಧಿಕಾರದಲ್ಲಿದ್ದಾರೆ. ವಿದ್ಯಾವಂತ ದಲಿತರಿಗೆ ಅನ್ಯಾಯ ಆಗುತ್ತಿರುವ ಈ ಸ್ಥಿತಿಯಲ್ಲಿ ಇನ್ನೂ ಅವಿದ್ಯಾವಂತರ ಸ್ಥಿತಿ ಹೇಳಲಸಾಧ್ಯ. ಗಾಂಧಿ, ಅಂಬೇಡ್ಕರ್ ವಿಚಾರ ಅಳವಡಿಸಿಕೊಂಡು ಹೋರಾಟವನ್ನು ತೀವ್ರಗೊಳಿಸಲಿಕ್ಕೆ ವಿದ್ಯಾರ್ಥಿಗಳು ಹೆಚ್ಚು ಹೆಚ್ಚಾಗಿ ಪಾಲ್ಗೊಂಡು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬೇಕೆಂದರು.

"ಹಿಂದೂ ಧರ್ಮ ಮತ್ತು ಪುರೋಹಿತಶಾಹಿ" ಬಗ್ಗೆ ಮುಳ್ಳೂರು ನಾಗರಾಜು ಮಾತಾಡುತ್ತಾ ಸಮಾನತೆ, ಮಾನವತೆ ಬೋಧಿಸದ ಧರ್ಮ ಧರ್ಮವೇ ಅಲ್ಲ ಎಂದೂ ಹಿಂದೂ ಧರ್ಮದ ಶ್ರೇಣಿಕೃತ ವರ್ಣಾಶ್ರಮವನ್ನು ಖಂಡಿಸಿದರು.

ಕಿ. ಪೂ. 6ರಲ್ಲಿ ಸಮಾಜದ ಹಿಂಸೆ, ರಾಜರುಗಳ ಮಧ್ಯೆ ನಡೆಯುತ್ತಿದ್ದ ಭೀಕರ ಯುದ್ಧಗಳನ್ನು ಸಮಾಪ್ತಿಗೊಳಿಸಿ, ಶಾಂತಿಯನ್ನು ಪ್ರೀತಿಯನ್ನು, ಸಮಾನತೆಯನ್ನೂ ಬುದ್ಧ ಬೌದ್ಧಧರ್ಮದ ಮೂಲಕ ಸ್ಥಾಪಿಸಿದನು. ಸುವರ್ಣ ಯುಗವೆಂದ ಕೃಷ್ಣದೇವರಾಯನಕಾಲದಲ್ಲಿ ಅಸ್ಪೃಶ್ಯರಸ್ಥಿತಿಭಯಾನಕವಾಗಿತ್ತು. ಆಗಿದ್ದೂ ಒಂದು ಲೈನ್‌ಕೂಡ ಅಸ್ಪೃಶ್ಯರ ಬಗ್ಗೆ ದಾಖಲಿಸದ್ದು ರಾಜರುಗಳ, ಪುರೋಹಿತರ ಕುತಂತ್ರ ತಾನೇ ಎಂದ ನಾಗರಾಜರು— 'ಮನು'ಧರ್ಮವನ್ನು 'ಸೈತಾನಿ ಸಂವಿಧಾನ' ಎಂದು ವ್ಯಾಖ್ಯಾನಿಸಿದರು. ಇದೇ ಧರ್ಮ ಸ್ತ್ರೀಗೆ ಸಾಯುವವರೆಗೆ ತುರ್ತುಸ್ಥಿತಿಯಾಗಿತ್ತು. ಯುದ್ಧ ಮಾಡುವುದು, ಸೋತವರ ಸ್ತ್ರೀಯನ್ನು ಗೆದ್ದವರು ಅತ್ಯಾಚಾರ ಮಾಡುವುದು, ನಿರ್ಜೀವ ವಸ್ತು ಎಂಬಂತೆ ಸ್ತ್ರೀಯನ್ನು ಉಪಯೋಗಿಸಿಕೊಂಡಿದ್ದಾರೆ. "ರಾಮ ಮನುವಿನ ಎಲ್ಲಾ ದುರಂತ ಮೊತ್ತ, ಸೀತೆ ಇಡೀ ಸ್ತ್ರಿ ಸಮೂಹದ ಪತನದ ಸಂಕೇತ' ಎಂದ ನಾಗರಾಜ್‌ರು ನಿರಂತರ ದೌರ್ಜನ್ಯಗಳು ಸ್ತ್ರೀ ಮೇಲೆ ನಡೆದಿದೆ ಎಂದರು. ಬೌದಿಕ ಬೆಳವಣಿಗೆ,ವೈಚರಿಕತೆ ಸ್ತ್ರಿಗೆ ಇರಲಿಲ್ಲಾ, ಈ ವಿಕೃತ ಮನಸ್ಸಿನ ಧರ್ಮಕ್ಕೆ ಬೇಸತ್ತ ಅಕ್ಕ ಮಹಾದೇವಿ, ಕಿಚ್ಚು ನೋವುಗಳ ಜೊತೆ, ಸಂಪ್ರದಾಯಗಳ ವಿರುದ್ಧವಾಗಿ ಅಂತಿಮವಾಗಿ ನಗ್ನವಾಗಿ ಬೀದಿಗಿಳಿಯಬೇಕಾಯಿತು ಎಂದರು.

ಸಾವಿರಾರು ವರ್ಷಗಳಿಂದ ನರಕಹಿಂಸೆ, ನೋವನ್ನು ಸಹಿಸಿಕೊ.ಡು ಬಂದಿದ್ದೇವೆ. ವಿಚಾರಕ್ರಾಂತಿ

(8ನೇ ಪುಟಕ್ಕೆ)

# ಗೇಣಿಪದ್ಧತಿ ಮತ್ತು ಸರ್ಕಾರದ ಕುರುಡು ಕಾನೂನುಗಳು

**ಭೂ ಸುಧಾರಣಾ ಚರಿತ್ರೆ-3**

**ಕ್ಷೀರಸಾಗರ**

ಭೂ ಮಾಲೀಕನಿಂದ ಒಂದು ಗೊತ್ತಾದ ಸಮಯದವರೆಗೆ ವ್ಯವಸಾಯಗಾರನೊಬ್ಬ ತನ್ನ ಅಧೀನಕ್ಕೆ ಭೂಮಿಯನ್ನು ಪಡೆದು ಸ್ವಂತ ವ್ಯವಸಾಯ ಮಾಡುತ್ತಿದ್ದು ಇಂತಿಷ್ಟು ಎಂದು ಗುತ್ತಿಗೆಯನ್ನು ಕೊಡುತ್ತಿದ್ದರೆ ಅವನು ಗೇಣಿದಾರ ಎನಿಸಿಕೊಳ್ಳುತ್ತಾನೆ. ಅರ್ಥಾತ್ "ಶಾಶ್ವತ ಗೇಣಿದಾರ ಅಂದರೆ ಸ್ವತಃ ಭೂಮಿಯನ್ನು ಬೇಸಾಯ ಮಾಡುವವರು" [24] ಸ್ಥೂಲವಾಗಿ ಹೇಳುವುದಾದರೆ ಭೂ ಮಾಲಿಕರ ಭೂಮಿಯನ್ನು ಇತರರು ವ್ಯವಸಾಯ ಮಾಡುತ್ತಾರೆ ಎನಿಸುವ ಉತ್ಪಾದನೆ ಸಂಬಂಧವಾಗಿ ಕಾಣುತ್ತದೆ, ಆದರೆ ಇದೇ ರೀತಿಯ ಉತ್ಪಾದನಾ ಸಂಬಂಧ ಹೊಂದಿದ್ದೂ ಅನೇಕ ಸಂಬಂಧಗಳು "ಗೇಣಿ ಸಂಬಂಧ ಅನಿಸಿಕೊಳ್ಳುವ ರೀತಿಯಲ್ಲಿ ಕಾನೂನು ರಚನೆಯಾಗಿರುವುದನ್ನು ನಾವು ಕಾಣಬಹುದು.

**ಗೇಣಿ ಮತ್ತು ಭೋಗ್ಯದ ತೊಡಕು**

ಭೋಗ್ಯ ಅನ್ನುವ ಉತ್ಪಾದನಾ ವಿಧಾನವನ್ನೇ ತೆಗೆದುಕೊಳ್ಳಿ. ಇಲ್ಲಿ ಗುತ್ತಿಗೆಯ ಬದಲು ಮುಂಗಡ ಹಣವನ್ನು ಭೂ ಮಾಲಿಕನಿಗೆ ಕೊಡಲಾಗಿರುತ್ತದೆ. ನಂತರ ಭೂ ಮಾಲಿಕನ ಭೂಮಿಯನ್ನು ಹಣ ಕೊಟ್ಟವನು ಉಳುಮೆ ಮಾಡುತ್ತಾನೆ. ಇದು ಗೇಣಿಗಿಂತ ತೀರ ಭಿನ್ನವಾದ ರೂಪ ಅನಿಸುವುದಿಲ್ಲ. ಯಾಕೆಂದರೆ ಭೂ ಮಾಲಿಕನೊಬ್ಬ ಒಂದು ಎಕರೆ ಗದ್ದೆಯನ್ನು 2 ಸಾವಿರ ರೂ.ಗಳಿಗೆ ಭೋಗ್ಯ ಮಾಡಿರುತ್ತಾನೆ ಎಂದಿಟ್ಟುಕೊಳ್ಳಿ— ಅಂದರೆ ಈ ಒಂದು ಎಕರೆ ಭೂಮಿಯನ್ನು ವ್ಯವಸಾಯ ಮಾಡಲು 2ಸಾವಿರ ರೂಗಳನ್ನು ಮುಂಗಡವಾಗಿ ಕೊಟ್ಟು ಅದರ ಬಡ್ಡಿಗಾಗಿ ಎಲ್ಲಾ ಫಸಲನ್ನು ವ್ಯವಸಾಯ ಮಾಡಿದವನೇ ಅನುಭವಿಸುತ್ತಾನೆ. ಇಲ್ಲಿ ಕಾಣುವ ವ್ಯತ್ಯಾಸ ಇಷ್ಟೆ: "ಭೂ ಒಡೆಯ ಮುಂಗಡವಾಗಿ—ಸಾಲದ ರೂಪದ ಹಣ ಕೊಟ್ಟು ಆ ಜಮೀನನ್ನು ವ್ಯವಸಾಯ ಮಾಡಿದರೆ'ಭೋಗ್ಯ' ಎನಿಸಿಕೊಳ್ಳುತ್ತದೆ. ಭೂ ಒಡೆಯನಿಂದ ಮೊದಲು ಭೂಮಿ ಪಡೆದು ನಂತರ ಧಾನ್ಯದ ರೂಪದಲ್ಲಿ ಹಣ ಕೊಟ್ಟರೆ ಅದು 'ಗೇಣಿ' ಎನಿಸಿಕೊಳ್ಳುತ್ತದೆ".

ಎರಡು ಉದಾಹರಣೆಗಳಲ್ಲೂ ಉತ್ಪಾದನಾ ವಿಧಾನ ಒಂದೇ ಆಗಿದ್ದರೂ ಸರ್ಕಾರದ ಕಾನೂನಿನ ಕಣ್ಣಿನೊಳಗೆ ಒಂದು ಗೇಣಿ ಎನಿಸಿಕೊಳ್ಳುತ್ತದೆ ಮತ್ತೊಂದು ಭೋಗ್ಯ (Martgage) ಎನಿಸಿಕೊಳ್ಳುತ್ತದೆ.ಅಧ್ಯಾಯ I 2 21ರ ಪ್ರಕಾರ 'ಭೂ ಮಾಲೀಕ ಎಂದರೆ ಭೋಗ್ಯದ ಸ್ವತ್ತೂ ಸೇರಿದಂತೆ ಅವನು ಭೂಮಿಯ ಒಡೆಯನಾಗುತ್ತಾನೆ' [25] ಅಂದರೆ ಭೋಗ್ಯಕ್ಕೆ ಭೂಮಿಯನ್ನು ಪಡೆದವನು ಅದರ ಒಡೆಯನೇ ಆಗಿರುತ್ತಾನೆ. ಆದರೆ ಗೇಣಿದಾರನಂತೆಯೇ ಸ್ವತಃ ವ್ಯವಸಾಯ ಮಾಡುತ್ತಿದ್ದ ಭೋಗ್ಯದಾರನಿಗೆ ಈ ಕಾನೂನಿನಲ್ಲಿ ಆ ಒಡೆತನವನ್ನು ಸ್ಥಾಪಿಸಿಕೊಳ್ಳುವ ಹಕ್ಕು ಮಾತ್ರ ಇರುವುದಿಲ್ಲ. ಇವನು ಕೇವಲ ನಾಮಕಾವಸ್ತೆ ಹಕ್ಕುದಾರನಾಗುತ್ತಾನೆ. ಉದಾಹರಣೆಗೆ ಅಧ್ಯಾಯ II 4– (c) ಪ್ರಕಾರ 'ಇತರರ ಭೂಮಿಯನ್ನು ವ್ಯವಸಾಯ ಮಾಡುತ್ತಿದ್ದರೂ ಅವನು ಭೋಗ್ಯದಾರನಾಗಿದ್ದರೆ ಅವನು ಗೇಣಿದಾರ ಎನಿಸಿಕೊಳ್ಳುವುದಿಲ್ಲ. [26] ಅಂದರೆ ಗೇಣಿದಾರನಂತೆ ಸ್ವತಃ ವ್ಯವಸಾಯ ಮಾಡುತ್ತಿದ್ದರೂ ಅವನು ಭೂ ಒಡೆಯನಾಗಲಾರ. ಟ್ರಿಬುನಲ್ ಸದಸ್ಯರೊಬ್ಬರ ಪ್ರಕಾರ —'ಬಹಳಷ್ಟು ಭೂ ಮಾಲೀಕರು ಭೂಮಿಯನ್ನು ಗೇಣಿಗೆ ಕೊಟ್ಟಿದ್ದರೂ ಅದನ್ನು ಭೋಗ್ಯಕ್ಕೆ ಕೊಟ್ಟಂತೆ ಮಾಡಿ ಸುಳ್ಳು ರೆಕಾರ್ಡುಗಳನ್ನು ಸೃಷ್ಟಿಸಿ ಆ ಭೂಮಿ ತಮಗೆ ವಾಪಸ್ಸು ಬರಬೇಕು ಎಂದು ಸಾಧಿಸಿ ನಿಜವಾದ ಗೇಣಿ ಜಮೀನಾಗಿದ್ದರೂ ಭೋಗ್ಯ ಎಂದು ವಾಪಸ್ಸು ಪಡೆದ ಘಟನೆಗಳು ಹೇರಳವಾಗಿವೆ' ಎನ್ನುತ್ತಾರೆ.[27]

ಜಮೀನಿನ ಭೋಗ್ಯದಲ್ಲಿರುವ ಉತ್ಪಾದನಾ ಸಂಬಂಧ ಗೇಣಿಗಿಂತ ಭಿನ್ನವಲ್ಲದಿದ್ದರೂ ಸರ್ಕಾರ ಇವರಿಗೆ ಒಡೆತನದ ಹಕ್ಕನ್ನು ಕೊಡದೆ ಕಾನೂನು ರಚಿಸಿರುವುದೇ ಒಂದು ಮೋಸವಾದರೆ ಈ ಕಾನೂನಿನ ಕುರುಡು ತನವನ್ನೇ ಬಳಸಿಕೊಂಡು ಭೂ ಮಾಲಿಕರು ನಿಜವಾದ ಗೇಣಿದಾರರ ಹಾಗೂ ಟ್ರಿಬುನಲ್ ಸದಸ್ಯರ ಕಣ್ಣಿಗೆ ಮಣ್ಣೆರೆಚುವುದು ಇನ್ನೂ ದೊಡ್ಡ ಅನ್ಯಾಯದ ಸಂಗತಿಯಾಗಿದೆ.

ಇಲ್ಲಿ ಮತ್ತೆ ತಲೆ ಎತ್ತುವ ಸಮಸ್ಯೆಗಳೆಂದರೆ ಭೂ ಮಾಲಿಕ ಗೇಣಿದಾರ ಮತ್ತು ಭೋಗ್ಯದಾರ– ಇವರ ವರ್ಗಗಳನ್ನು ಗಣನೆಗೆ ತೆಗೆದುಕೊಂಡರೆ– ಬಹಳ ಕೇಸುಗಳಲ್ಲಿ ಒಂದೇ ವರ್ಗದವರಾಗಿ ಅಥವ ಗೇಣಿದಾರ ಮತ್ತು ಭೋಗ್ಯದಾರ ಮಧ್ಯಮ ರೈತರಾಗಿದ್ದು, ಭೂ ಮಾಲಿಕ ಸಣ್ಣ–ಅಥವ ಬಡರೈತನಾಗಿರುವ ಸಾಧ್ಯತೆಯೇ ಹೆಚ್ಚು. ಇಂಥ ಸಂದರ್ಭಗಳಲ್ಲಿ ಇವರು ಯಾವ ಯಾವ ವರ್ಗಕ್ಕೆ ಸೇರಿದ್ದಾರೆ ಅನ್ನುವುದನ್ನು ಗಣನೆಗೆ ತೆಗೆದುಕೊಳ್ಳದೆ ಗೇಣಿದಾರನಿಗೇ (ಭೋಗ್ಯದಾರನೂ ಗೇಣಿದಾರನೇ ಎಂದು ತಿದ್ದುಪಡಿ ಮಾಡಿದರೂ ಕೂಡ) ಭೂ ಒಡೆತನ ಸಿಕ್ಕಬೇಕು ಎಂದು ಏಕ ರೂಪತೆಯ ಕಾನೂನು ತರುವುದು, ಬಹಳಸಾರಿ ಬಡರೈತರಿಂದ ಭೂಮಿಯನ್ನು ಕಿತ್ತು ಮಧ್ಯಮ ಮತ್ತು ಶ್ರೀಮಂತ ರೈತರಿಗೆ ಒಡೆತನ ಕೊಟ್ಟಂತಾಗುತ್ತದೆ. ಇಂಥ ವಕ್ರ ಕಾನೂನಿನ ಅಡಿಯಲ್ಲಿ ಸಿಕ್ಕು ಬಡರೈತರು ದಿಕ್ಕುಗಾಣದೆ ಕೃಷಿಕಾರ್ಮಿಕರಾಗಿ ಮಾರ್ಪಡುತ್ತಿದ್ದಾರೆ.

**ಗೇಣಿ ಮತ್ತು ವಾರದಸಂಬಂಧಗಳಲ್ಲಿ ಉಸಿರು ಸಿಕ್ಕ ಜನ :**

ಅಧ್ಯಾಯ II 4–(b) ಪ್ರಕಾರ 'ಸೇವಕ ಅಥವ ಕೂಲಿಗಾರ ; ಅಥವ ಭೂ ಮಾಲಿಕನೇ ತನ್ನ ಸ್ವಂತ ಉಸ್ತುವಾರಿಯಲ್ಲಿ ಅಥವ ತನ್ನ ಕುಟುಂಬದ ಸದಸ್ಯರ ಉಸ್ತುವಾರಿಯಲ್ಲಿ ವ್ಯವಸಾಯ ಮಾಡುತ್ತಿದ್ದರೆ ಅವನು ಗೇಣಿದಾರನೆನಿಸಿಕೊಳ್ಳುವುದಿಲ್ಲ.[28]

ಈ ಕಾನೂನಿನ ಪ್ರಕಾರ ಒಂದು ಗೊತ್ತಾದ ಜಮೀನಿನಲ್ಲಿ ಯಾರು ಶ್ರಮ ಹಾಕುತ್ತಾರೆ ಅನ್ನುವುದುಮುಖ್ಯವಾಗುವುದಿಲ್ಲ. **ಭೂಮಾಲೀಕನ ಉಸ್ತುವಾರಿಯಲ್ಲಿ** (Under the Supervision of the owner) ವ್ಯವಸಾಯೋತ್ಪಾದನೆಯಾದರೆ ಸಾಕು ಯಾರೇ ಉಳುಮೆ ಮಾಡಿದರೂ ಆ ಭೂಮಿಗೆ ಒಡೆಯರಾಗುವುದಿಲ್ಲ. ಹೀಗಾಗಿ ಗೊತ್ತಾದ ಒಂದು ಭೂಮಿಯಲ್ಲಿ ಶೇಕಡ 90 ಭಾಗ ಶ್ರಮಹಾಕಿದ ಜೀತಗಾರ ಅಥವ ಕೂಲಿಕಾರನಾಗಲಿ ಒಡೆಯನಾಗುವುದಿಲ್ಲ. ಇದಕ್ಕೆ ಕಾನೂನಿನ ಬೆಂಬಲವಿಲ್ಲ. ಉಸ್ತುವಾರಿ ಮಾಡು

ಹೆಸರಿನಲ್ಲೇ ಉಳಿಸಿಕೊಳ್ಳಬಲ್ಲ. ಅವನು ಭೂ ಮಾಲಿಕನಾಗಿರಲಿ ಗೇಣಿದಾರನಾಗಲಿ ಉಸ್ತುವಾರಿ ಮಾಡಿದವನು ಸ್ವತಃ ಉಳುಮೆ ಮಾಡದಿದ್ದರೂ ಭೂಮಿಯ ಒಡೆತನವನ್ನು ಸ್ಥಾಪಿಸಕೊಳ್ಳಬಲ್ಲ. ಅದಕ್ಕೆ ಕಾನೂನಿನ ಬೆಂಬಲವಿದೆ.

ಸ್ವತಃ ವ್ಯವಸಾಯ ಮಾಡುವ-ವಾರಕ್ಕೆ ಭೂಮಿ ವ್ಯವಸಾಯ ಮಾಡುವ ವಾರದಾರನಾಗಲಿ, ಕೂಲಿ ಕಾರ, ಜೀತಗಾರ ಅಥವ ಭೋಗ್ಯದಾರನಾಗಲಿ, ಭೂ ಒಡೆತನವನ್ನು ಸ್ಥಾಪಿಸಿಕೊಳ್ಳುವುದು ಕಷ್ಟ ವಾಗುತ್ತದೆ.

'ಸ್ವಂತಸಾಗುವಳಿ'ಯ ಬಗ್ಗೆ ಕರ್ಣಾಟಕ ಭೂ ಸುಧಾರಣೆಯ ವ್ಯಾಖ್ಯಾನವನ್ನು ನೋಡಿ."(1)ತನ್ನ ದೇಹಶ್ರಮದಿಂದ, ಇಲ್ಲವೆ (2) ತನ್ನ ಕುಟುಂಬದ ಯಾವುದೇ ಸಮುಸ್ಯ ದೇಹ ಶ್ರಮದಿಂದ, ಇಲ್ಲವೇ (3) ಬಾಡಿಗೆಯ ಮಜೂರದಿಂದ ಇಲ್ಲ ನಗದಿ ಯಾಗಿ ಅಥವಾ ಉತ್ಪನ್ನದ ರೂಪದಲ್ಲಿ ಅದರೆ ಉತ್ಪನ್ನದ ಅಂಶವಲ್ಲದ ಮಜೂರಿಗೆ ನೇಮಿಸಿದ ಆಳುಗಳಿಂದ ಅಥವಾ ತನ್ನ ಅಥವಾ ತನ್ನ ಕುಟುಂಬದ ಮನುಷ್ಯನ ಸ್ವಂತ ಮೇಲ್ವಿಚಾರಣೆಯಲ್ಲಿ ಜಮೀನನ್ನು ಸಾಗುವಳಿ ಮಾಡುವುದು.

**ವಿವರಣೆ** : ಆಸ್ತಿಯನ್ನು ಧಾರಣ ಮಾಡಲು ಸಮರ್ಥವಿರುವ ಹಾಗೂ ಶೈಕ್ಷಣಿಕ ಧಾರ್ಮಿಕ ಇಲ್ಲವೆ ದಾನ ಧರ್ಮದ ಉದ್ದೇಶಗಳಿಗಾಗಿ ಸ್ಥಾಪಿಸಲ್ಪಟ್ಟ ಯಾವುದೇ ಸಾರ್ವಜನಿಕ ವಿದ್ಯಾ ಪ್ರಸಾರದ, ಧಾರ್ಮಿಕ ಇಲ್ಲವೇ ವಿಶ್ವಸ್ಥ ನಿಧಿಯ ನೌಕರನ ಅಥವ ಏಜಂಟನ ಸ್ವಂತ ಮೇಲ್ವಿಚಾರಣೆ ಯೊಳಗೆ ಬಾಡಿಗೆಯ ಮಜೂರರಿಂದ ಇಲ್ಲವೆ ಆಳುಗಳಿಂದ ಸಾಗು ಮಾಡಲ್ಪಟ್ಟಿದ್ದರೆ ಅದು ಸ್ವಂತ ಸಾಗುಮಾಡಲ್ಪಟ್ಟಿದೆ" ಎಂದು ಗಣಿಸಲಾಗುವುದು.[32]

ಈ ಹಿನ್ನೆಲೆಯಲ್ಲಿ ಸ್ವತಃ ವ್ಯವಸಾಯಕ್ಕೂ ಸ್ವಂತ ವ್ಯವಸಾಯಕ್ಕೂ ವ್ಯತ್ಯಾಸವಿದೆ. ಸ್ವತಃ ವ್ಯವಸಾಯ ಮಾಡುವವನಿಗೆ ಭೂ ಒಡೆತನ ಸಿಕ್ಕುತ್ತಿಲ್ಲ ಎಂದು 2-7-80ರಂದು ಖಾದ್ರಿ ಶಾಮಣ್ಣನವರು ಹೇಳಿದ ಮಾತು ಸೂಕ್ತ ವೆನಿಸುತ್ತದೆ.[33]

ಅಂದರೆ ಈ ಭೂ ಸುಧಾರಣ ಪ್ರಕಾರ ಉಳುವವನೇ ನಿಜವಾದ ಭೂ ಒಡೆಯನಲ್ಲ—ಉಸ್ತುವಾರಿ ನೋಡಿಕೊಳ್ಳುವವನು ನಿಜವಾದ ಭೂ ಒಡೆಯನಾಗುತ್ತಾನೆ. ಈ ವ್ಯತ್ಯಾಸವನ್ನು ಕಂಡುಕೊಳ್ಳದ ಎಡಪಕ್ಷಗಳೂ ಕೂಡ ಈ ಸುಧಾರಣೆಯನ್ನು ಪ್ರಗತಿಪರ ಎಂದು ಕರೆದಿರುವುದು ಅವರ ಅಮಾಯಕತೆಯನ್ನು ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ಉಳುವವನೇ ಭೂ ಒಡೆಯ ಅನ್ನುವ ವಾಕ್ಯ ಎಷ್ಟೊಂದು ಮೋಸ ಮತ್ತು ಕುಹಕತೆಯಿಂದ ಕೂಡಿದೆ ಅನ್ನುವುದು ಸ್ಪಷ್ಟವಾಗುತ್ತದೆ.

## ಅಡಿ ಟಿಪ್ಪಣಿಗಳು:

24. Karnataka land reforms Act as amended upto 7th March 1980 ಒಂದನೇ ಅಧ್ಯಾಯ 2ನೇ ಕಲಮ್ಮಿನಲ್ಲಿ 23 ನೇ ಸಹಕಲಂ-ಪುಟ— 6.

25. Ibid— Chapter I 2 (21) Page-7.

26. Ibid— Chapter II 4 (c) Page—12.

27. 4-3-1983 ರಂದು ಮೈಸೂರು ತಾಲ್ಲೂಕು ಭೂನ್ಯಾಯ ಮಂಡಳಿಯ ಸದಸ್ಯರೊಡನೆ ನಡೆಸಿದ ಸಂದರ್ಶನ.

28. Karnataka land reforms in Act Chapter II 4- (b) Page -12.

29. ನಂಜನಗೂಡು ತಾಲ್ಲೂಕಿನ ನೆರಿಗೆ ಎಂಬ ಊರಿನಲ್ಲಿದ್ದ ಗೇಣಿದಾರರ ಒಂದು ಎಕರೆ ರಾಗಿ ಬೆಳೆಯಲು ಹಾಕಿದ ಶ್ರಮದ ಕೇಸ್ ಸ್ಟಡಿ ಮಾಡಿದಾಗ ಕುಟುಂಬದವರ ಶ್ರಮ 6 ಕೆಲಸದ ದಿನಗಳೂ 62 ಕೂಲಿಯ ಕೆಲಸದ ದಿನಗಳೂ ಇದ್ದದ್ದು ಕಂಡು ಬಂತು.

30. Pranab Bardhan-variations in extent and farms of Agricultural tenancy Part-I EPW Sept. 11, 1976.

31. Dr. Thimmaiah and Abdul Azeez—The Political Economy of land reforms Karnataka Table No I and IV Page No 38 & 41.

32. ಕರ್ಣಾಟಕ ಭೂ ಸುಧಾರಣಾ ನಿಯಮಗಳು— ಶ್ರೀರಂಗರಾವ್ ತಲಚೇರಕರ— ಅಧ್ಯಾಯ I (II) (I) ಪುಟ—3.

33. 2-7-83ರಂದು ಮೈಸೂರಿನ ಹ್ಯುಮಾನಿಟೀಸ್ ಬ್ಲಾಕ್ ಮಾನಸಗಂಗೋತ್ರಿಯಲ್ಲಿ ಗಾಂಧಿ ಅಧ್ಯಯನ ಸಂಸ್ಥೆಯವರು ಪಂಚಾಯತ್‌ರಾಜ್ ಬಗ್ಗೆ ಏರ್ಪಡಿಸಿದ ಸೆಮಿನಾರ್‌ನಲ್ಲಿ ಖಾದ್ರಿ ಶಾಮಣ್ಣನವರ ಭಾಷಣ.

## ಮಾನವೀಯತೆ ಪ್ರೀತಿಯ ಸಮಾಜ ನಿರ್ಮಾಣಕ್ಕಾಗಿ

(5ನೇ ಪುಟದಿಂದ)

ಹೋರಾಟಗಳಿಂದ ಹಿಂದೂ ಧರ್ಮನಾಶವಾಗುತ್ತದೆ.ನಿರಂತರ ಎಚ್ಚರ ಜವಬ್ದಾರಿಯಲ್ಲಿ ಇತಿಹಾಸ ನಾಶಮಾಡಿ ಅಸ್ಪೃಶ್ಯರ ನಾಯಕತ್ವದಲ್ಲಿ ಹೋರಾಡಬೇಕಾಗಿದೆ ಎಂದು ನಾಗರಾಜರು ತಮ್ಮ ದೀರ್ಘವಾದ ವಿವರಣೆಯಲ್ಲಿ ತಿಳಿಸಿದರು.

ಮಧ್ಯಾಹ್ನದ ನಂತರ ದಸಂಸಕ್ಕೆ ಅತ್ಯವಶ್ಯಕವಾದ 'ದಸಂಸ ಕಾರ್ಯಕರ್ತನ ಸದಸ್ಯತ್ವ, ಅರ್ಹತೆ ಮತ್ತು ಜವಾಬ್ದಾರಿಗಳು ಎಂಬ ವಿಷಯವಬಗ್ಗೆ ಸ್ಪಷ್ಟವಾಗಿ ಚರ್ಚಿಸಿದ ಗಂಗಾರಾಂ ಚಂಡಾಳರು ಕಾರ್ಯಕರ್ತನು ಪ್ರಾಥಮಿಕ ಸಂಘಟನೆಯ ಕಾರ್ಯಗಳಿಗೆ ಸ್ಪಂದಿಸಬೇಕು. ರಾಜಕೀಯ, ಸಾಮಾಜಿಕ ಪ್ರಸ್ತುತ ಸೂಕ್ಷ್ಮ ಪ್ರಜ್ಞೆ ಬೆಳೆಸಿಕೊಳ್ಳಬೇಕು. ಚರಿತ್ರೆಯ ಕ್ರಾಂತಿಗಳ ಘಟನೆಗಳ ಅಧ್ಯಯನ ಅವಶ್ಯವಿದ್ದು, ಬೌದ್ಧಿಕ ಬೆಳವಣಿಗೆಗೆ, ಹೋರಾಟದ ಮನೋಭಾವನೆಯನ್ನು ವೃದ್ಧಿಪಡಿಸಿಕೊಳ್ಳಬೇಕೆಂದರು. ದಲಿತರ ಮತ್ತು ಸಮಿತಿಯ ಸಮಸ್ಯೆಗಳನ್ನು, ಭಿನ್ನಾಭಿಪ್ರಾಯಗಳನ್ನೂ ಮುಕ್ತವಾಗಿ ಚರ್ಚಿಸಬೇಕು. ದಸಂಸ ಕಾರ್ಯಕರ್ತನಿಗೆ ಹಳ್ಳಿಗಳಲ್ಲಿ ವಿಶೇಷ ಸ್ಥಾನ ಇರುವುದರಿಂದ ವೈಚಾರಿಕತೆ, ವಿಶಾಲ ಮತ್ತು ದೂರ ದೃಷ್ಟಿಯ ಭಾವನೆ ಮೂಲಭೂತವಾಗಿರಬೇಕೆ ಹೊರತು ಆಧುನಿಕತೆಯ ಆಡಂಬರಗಳಿಗೆ, ಭ್ರಮೆಗಳಿಗೆ ಅವಕಾಶ ಕೊಡಬಾರದು. ನಮ್ಮೆಲ್ಲಾ ನೋವಿನ ಇತಿಹಾಸದ ಅರಿವಿವಾಗಿ, ಮಾನವೀಯತೆಯ ಪ್ರೀತಿಯ ಸಮಾದ ನಿರ್ಮಾಣಕ್ಕಾಗಿ ದುಡಿಯಬೇಕಾಗಿದೆ ಎಂದರು.

ನಂತರ ಪಾಂಡವಪುರ ಬಸ್ ನಿಲ್ದಾಣದಲ್ಲಿ ಹೋರಾಟದ ಹಾಡುಗಳು ಬೀದಿ ನಾಟಕಮಾಡಿ ತರಬೇತಿ ಶಿಬಿರ ಮುಗಿಸಲಾಯ್ತು. ಸಿಂದ್‌ಘಟ್ಟದ ಗಿರಿಯಮ್ಮನ ಅತ್ಯಾಚಾರ ಪ್ರಕರಣದಲ್ಲಿ ಉನ್ನತ ಪೋಲೀಸ್ ಅಧಿಕಾರಿಗಳಿಗೆ ಸೂಕ್ತ ಕ್ರಮಕ್ಕಾಗಿ ಅಂತಿಮ ಪತ್ರ ಕಳುಹಿಸಲಾಗಿದ್ದು, ಅಧಿಕಾರಿಗಳು ಇನ್ನು ನಿಷ್ಕ್ರಿಯರಾದರೆ ಚಳುವಳಿಯನ್ನು ತೀವ್ರಗೊಳಿಸಬೇಕಾದ ಅನಿವಾರ್ಯವಿದೆ ಎಂದು ಜಿಲ್ಲಾ ದಸಂಸ ಶಾಖೆ ಸ್ಪಷ್ಟಪಡಿಸಿತು.

ತ್ತಿದ್ದ ಅನ್ನುವ ಒಂದೇ ಕಾರಣಕ್ಕಾಗಿ ಕೇವಲ ಶೇ. 10 ಭಾಗದ ಕುಟುಂಬದ ಶ್ರಮ ಹಾಕಿದ ಭೂ ಮಾಲಿಕ ಒಡೆಯನಾಗುತ್ತಾನೆ.

ಭೂಸುಧಾರಣೆಯ ಅಗಾಧ ಪ್ರಮಾಣದ ಮೋಸ ಅಡಗಿರುವುದು ಇಲ್ಲಿ. ನಿಜವಾದ ದೈಹಿಕ ಶ್ರಮಹಾಕಿ ವ್ಯವಸಾಯ ಮಾಡಿದ ಕೂಲಿಗಾರರು ಒಡೆಯರಾಗುವುದಿಲ್ಲ. ಬದಲಾಗಿ ಉಸ್ತುವಾರಿ ನಡೆಸಿದರು ಅನ್ನುವ ಒಂದೇ ಕಾರಣಕ್ಕಾಗಿ ಉಸ್ತುವಾರಿ ಮಾಡಿದವರು ಒಡೆಯರಾಗುತ್ತಾರೆ.

ಇದೇ ವಿಶ್ಲೇಷಣೆ 'ವಾರದ' ವ್ಯವಸಾಯಕ್ಕೂ ಅನ್ವಯವಾಗುತ್ತದೆ. ವಾರದ (Share croping) ವ್ಯವಸ್ಥೆಯಲ್ಲಿ ನಿಜವಾಗಿ ಶ್ರಮ ಹಾಕಿದವರು ವಾರಮಾಡುತ್ತಿದ್ದವರೇ ಆಗಿದ್ದರೂ ಗೊಬ್ಬರ ಮತ್ತು ಉಳುಮೆ ಮುಂತಾದವುಗಳಿಗೆ ಭೂ ಮಾಲಿಕ ಅರ್ಧ ಹಣ ಹೂಡಿದ್ದರೆ ವಾರಕ್ಕೆ ವ್ಯವಸಾಯ ಮಾಡುತಿದ್ದ ಗೇಣಿದಾರ ನಿಜವಾದ ಒಡೆಯನಾಗಲಾರ. ಇಲ್ಲಿ ಒಡೆತನ ದೊರಕಿಸಿಕೊಡದಿರುವುದು ಭೂರಹಿತ ಕೃಷಿಕಾರ್ಮಿಕರಿಗೆ ಮಾಡಿದ ಒಂದು ದೊಡ್ಡ ಮೋಸವಾಗಿದೆ' ಇನ್ನೂ ಸ್ವಲ್ಪ ವಿವರವಾಗಿ ನೋಡುವುದಾದರೆ ಗೇಣಿ ಮತ್ತು ವಾರದ ವ್ಯವಸಾಯ ವಿಧಾನಲ್ಲಿ ಪ್ರಣಬ್ ಬರ್ಧಾನ್‌ರ ಪ್ರಕಾರ ಸಾಮಾನ್ಯವಾಗಿ ಕಾಣುವ ವ್ಯತ್ಯಾಸದ ಅಂಶಗಳು.

—ಬ್ರಾಹ್ಮಣರು ಮತ್ತಿತರರಿಂದ ಗೇಣಿಗೆ ಭೂಮಿ ಪಡೆದ ಜಾತಿಗಳು ಒಕ್ಕಲಿಗರು ಮತ್ತು ಲಿಂಗಾಯಿತರು. ಇವರು ಈಗಾಗಲೆ ಅಲ್ಪಸ್ವಲ್ಪ ಭೂಮಿಯನ್ನು ಹೊಂದಿದ್ದು ರಾಜಕೀಯವಾಗಿಯೂ ಪ್ರಬಲವಾದ ಪ್ರತಿನಿಧಿಗಳನ್ನು ಪಡೆದವರು. ಹೀಗಾಗಿ ಗೇಣಿಕಾನೂನು ಇವರಿಗೆ ಒಂದು ವರವಾಯಿತು. ಆದರೆ ರಾಜಕೀಯವಾಗಿ ಕಡಿಮೆ ಪ್ರತಿನಿಧಿಗಳನ್ನೊಳಗೊಂಡ ಹರಿಜನ/ಗಿರಿಜನ ಮತ್ತು ಮುಸ್ಲಿಮರು ಬಹುಪಾಲು 'ವಾರ'ದ ಬೇಸಾಯ ಮಾಡುತ್ತಿದ್ದವರು ಈ ಕಾನೂನಿನಿಂದ ವಂಚಿತರಾದರು. ಯಾಕೆಂದರೆ ಗೇಣಿ ಪದ್ಧತಿಗೆ ದೊರೆತಷ್ಟು ಭೂ ಒಡೆತನ ವಾರ-ಮಾಡುವವರಿಗೆ ದೊರೆಯಲೇ ಇಲ್ಲ. ಈ ಹಿನ್ನೆಲೆಯಲ್ಲಿ ನೋಡಿದರೆ 'ರಾಜಕೀಯವಾಗಿ ಆಡಳಿತದಲ್ಲಿದ್ದ ಪ್ರಬಲ ಕೋಮುಗಳು ಭೂ ಸುಧಾರಣೆಯನ್ನು ತಮ್ಮ ಕೋಮಿನವರ ಹಿತಸಾಧನೆಗಳಿಗಾಗಿ ಬಳಸಿಕೊಂಡಿದ್ದು ಸ್ಪಷ್ಟವಾಗುತ್ತದೆ'[1] ಹಾಗೆಯೇ ರಾಜಕೀಯ ಪ್ರಾತಿನಿಧ್ಯದಲ್ಲಿ ದುರ್ಬಲರಾಗಿದ್ದ ಹರಿಜನ/ಮುಸ್ಲಿಂರು ತಾವೇ ಸ್ವತಃ ವಾರಕ್ಕೆ ವ್ಯವಸಾಯ ಮಾಡುತ್ತಿದ್ದರೂ ಭೂ ಒಡೆತನ ಸ್ಥಾಪಿಸಿಕೊಳ್ಳಲಾರದೆ ಬವಣೆ ಪಡುತ್ತಿರುವುದನ್ನು ನಾವು ಕಾಣಬಹುದು.

| | ಗೇಣಿದಾರ | | ವಾರದ ವ್ಯವಸಾಯಗಾರ |
|---|---|---|---|
| 1. | ಅಲ್ಪ ಸ್ವಲ್ಪ ಭೂಮಿ ಹೊಂದಿರುವವನು | .... | ಭೂಮಿ ಇಲ್ಲದವನು. |
| 2. | ಕೊಡಬೇಕಾದ ಗುತ್ತಿಗೆಯ ಬಗ್ಗೆ ಭೂಮಾಲಿಕನ ಜೊತೆ ಚೌಕಾಸಿ ಮಾಡಬಲ್ಲವನು. | .... | ಈ ವಿಷಯದಲ್ಲಿ ಚೌಕಾಸಿ ಮಾಡಲು ಅಶಕ್ತ. |
| 3. | ಕೂಲಿಯ ಆಳುಗಳನ್ನು ನೇಮಿಸಿಕೊಂಡು ವ್ಯವಸಾಯ ಮಾಡುತ್ತಾನೆ. | .... | ಸ್ವತಃ ಕುಟುಂಬದ ಶ್ರಮ ಹಾಕುತ್ತಾನೆ. |
| 4. | ಅಲ್ಪಸ್ವಲ್ಪ ಉತ್ಪಾದನಾ ಸಾಧನಗಳನ್ನು ಹೊಂದಿರುವವನು. | .... | ಉತ್ಪಾದನಾ ಸಾಧನಗಳನ್ನು ಹೊಂದಿಲ್ಲದವನು. |
| 5. | ಒಂದು ವರ್ಷಕ್ಕಿಂತ ಹೆಚ್ಚು ಕಾಲ ಆ ಭೂಮಿಯನ್ನು ವ್ಯವಸಾಯ ಮಾಡಲು ಒಪ್ಪಿಕೊಂಡಿರುವವನು. | .... | ಪ್ರತಿ ಬೆಳೆಯ ನಂತರದಲ್ಲೂ ಹೊಸದಾಗಿ ವಾರದ ಹಕ್ಕನ್ನು ಪಡೆಯಬೇಕಾಗುತ್ತದೆ. |
| 6. | ಜಾತಿ ದೃಷ್ಟಿಯಿಂದ ವ್ಯವಸಾಯ ಜಾತಿಗಳಾದ ಒಕ್ಕಲಿಗ, ಲಿಂಗಾಯಿತ ಜಾತಿಗಳಿಗೆ ಸೇರಿದವನು. | .... | ಹರಿಜನ, ಗಿರಿಜನ ಮುಸ್ಲಿಂ ಮತ್ತು ಬೆಸ್ತ ಮುಂತಾದ ಭೂ ರಹಿತ ಜಾತಿಗೆ ಸೇರಿದವನು. |

ಈ ಎಲ್ಲ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಗೇಣಿದಾರರು ಮತ್ತು ವಾರಕ್ಕೆ ವ್ಯವಸಾಯ ಮಾಡುವವರನ್ನು ಕರ್ನಾಟಕದ ರಚನೆಯೊಳಗೆ ನೋಡುವುದಾದರೆ ಕಂಡು ಬರುವ ಸತ್ಯಾಂಶವೆಂದರೆ ಕರ್ನಾಟಕದ ಹಳ್ಳಿಗಾಡಿನ ವ್ಯವಸಾಯ ವ್ಯವಸ್ಥೆಯನ್ನು ನೋಡಿದಾಗ ಇತ್ತೀಚಿಗೆ ಗೇಣಿ ಪದ್ಧತಿಗಿಂತ ವಾರದ ವ್ಯವಸಾಯ ಹೆಚ್ಚು ಪ್ರಚಲಿತವಾಗುತ್ತಿದೆ. ಈ ಹಂತದಲ್ಲಿ ಸ್ವತಃ ಶ್ರಮಹಾಕಿ ಬೆಳೆ ಬೆಳೆದ 'ವಾರ' ದಾರ ಭೂ ಒಡೆತನ ಸ್ಥಾಪಿಸಿಕೊಳ್ಳಲಾರದೆ ಬವಣೆ ಅನುಭವಿಸುತ್ತಾನೆ. ಭೂ ಸುಧಾರಣಾ ಕಾನೂನು ಬಂದಮೇಲೆ ಗೇಣಿಗೆ ಜಮೀನನ್ನು ಕೊಟ್ಟರೆ ಜಮೀನನ್ನು ಗೇಣಿದಾರ ಕಳೆದುಕೊಳ್ಳಬೇಕಾಗುತ್ತದೆ ಅನ್ನುವ ಎಚ್ಚರಿಕೆಯಿಂದ (ತಾವು ಸ್ವತಃ ಉಸ್ತುವಾರಿ ವಹಿಸಲಾಗದ ಭೂ ಒಡೆಯರು) ಗೇಣಿಯದೇ ಇನ್ನೊಂದು ಉಪ ಮಾರ್ಗವಾದ 'ವಾರ' ವನ್ನು ತಮ್ಮ ಅನುಕೂಲಕ್ಕೆ ಬಳಸಿಕೊಂಡು ವಾರದ ವ್ಯವಸಾಯಕ್ಕೆ ಜಮೀನನ್ನು ಕೊಡುತ್ತಿರುವುದು ಎಲ್ಲ ಕಡೆಗಳಲ್ಲೂ ಕಂಡು ಬರುತ್ತಿರುವ ದೃಶ್ಯವಾಗಿದೆ. ಪ್ರತಿ ಬೆಳೆಗೂ ವಾರಕ್ಕೆ ಕೊಟ್ಟಾಗ ಹೊಸ ಒಪ್ಪಂದಗಳಿಗೆ ಅಥವ ಹೊಸ ವ್ಯಕ್ತಿಗಳಿಗೆ ಕೊಡುವುದರಿಂದ ಉಳುಮೆ ಮಾಡುವವರು ಹೆಚ್ಚು ಕಾಲ ಅಂದರೆ ವರ್ಷಗಟ್ಟಲೆ ವಾರ ಮಾಡದಿರುವುದರಿಂದ ಇವರು ಒಡೆತನ ಸ್ಥಾಪಿಸುವುದು ಕಷ್ಟವಾಗುತ್ತದೆ. ಜೊತೆಗೆ ಭೂ ಮಾಲಿಕ ಮತ್ತು ವಾರಕ್ಕೆ ವ್ಯವಸಾಯ ಮಾಡುವವರ ನಡುವೆ ಯಾವುದೇ ರೀತಿಯ ಕಾಗದದ ಮೂಲಕ ಒಪ್ಪಂದವಾಗದಿರುವುದರಿಂದ ಸತ್ಯವನ್ನು ಸ್ಥಾಪಿಸುವುದು ಕಷ್ಟವಾಗುತ್ತದೆ.

ಗೇಣಿಯಿಂದ ವಾರಕ್ಕೆ ಬದಲಾಗುತ್ತಿರುವ ಉತ್ಪಾದನಾ ಸಂಬಂಧದ ಬಗ್ಗೆ ಸರಿಯಾದ ಸಮೀಕ್ಷೆ ನಡೆಸಿದರೆ 1962ರ ನಂತರ ಗೇಣಿಗಿಂತ ವಾರದ ಉತ್ಪಾದನಾ ವಿಧಾನ ಹೆಚ್ಚುತ್ತಿರುವುದನ್ನು ನಾವು ಕಾಣಬಹುದು. ಇಂಥ ಬದಲಾವಣೆಗೆ ಕಾರಣ ವಾರವನ್ನು ಗೇಣಿಯಲ್ಲ ಎಂದು ಸಾಧಿಸಿ ಭೂ ಮಾಲಿಕರು ಭೂಮಿಯನ್ನು ತಮ್ಮ ಒಡೆತನದಲ್ಲೇ ಇಟ್ಟುಕೊಳ್ಳಲು ಸಾಧ್ಯವಾಗುವುದರಿಂದ. ಇಂಥ ಕುಹಕಕ್ಕೆ ಬಲಿಯಾದವರೂ ಬಹಳ ಮಂದಿ ಭೂ ರಹಿತ ಕೃಷಿ ಕಾರ್ಮಿಕರಾದ ಹರಿಜನರೇ ಹೆಚ್ಚು ಎನ್ನುವುದು ಒಂದು ದುರಂತ.

ಈ ಹಂತದಲ್ಲಿ ವ್ಯವಸಾಯೋತ್ಪಾದನೆಯ ಸಂಬಂಧಗಳನ್ನು ಕೂಲಂಕುಶವಾಗಿ ಪರಿಶೀಲಿಸುವ ಅಗತ್ಯವಿದೆ.

**'ಸ್ವಂತ' ಮತ್ತು 'ಸ್ವತಃ' ವ್ಯವಸಾಯ**

ಸ್ವಂತ ವ್ಯವಸಾಯ ಮತ್ತು ಸ್ವತಃ ವ್ಯವಸಾಯಕ್ಕೂ ವ್ಯತ್ಯಾಸವಿದೆ. ಸ್ವಂತ ವ್ಯವಸಾಯವೆಂದರೆ ತಾನು ಜಮೀನಿನ ಉಸ್ತುವಾರಿ ನಡೆಸುತ್ತ ಕೂಲಿಕಾರ ಮತ್ತು ಜೀತಗಾರರು ಮುಂತಾದವರನ್ನು ನೇಮಿಸಿಕೊಂಡು ಬೆಳೆ ಬೆಳೆಯುವುದು. ಇಲ್ಲಿ ತಾನಾಗಲಿ ತನ್ನ ಕುಟುಂಬದವರಾಗಲಿ ನೇರ ಶ್ರಮ ಹಾಕಬೇಕಾಗಿಲ್ಲ. ಉಸ್ತುವಾರಿ ನಡೆಸಿದರೆ ಸಾಕು—ಈ ವ್ಯವಸ್ಥೆಯಲ್ಲಿ ಅವನು ತನ್ನ ಜಮೀನನ್ನು ತನ್ನ

## ಅನುಭವದ ಗಣಿಯಿಂದ

# ನಾವು ಹಿಂದೂಗಳ ಲಾಭಕ್ಕೆ ಮಾತ್ರ?

1937ರ ಜೂನ್ ತಿಂಗಳ ಒಂದು ದಿನ ನಮ್ಮಲ್ಲಿ ಮೂರು ಮಂದಿಯನ್ನು ನಮ್ಮೂರ ಶಾಲೆಗೆ ಪ್ರಪ್ರಥಮವಾಗಿ ಸೇರಿಸಿದರು. ನಮಗೆ ಪ್ರತ್ಯೇಕ ಒಂದು ಹಳೆ ಬೆಂಚು. ನಾವು ಸ್ಲೇಟಿನ ಮೇಲೆ ಬರೆದು ಮೇಜಿನ ಮೇಲೆ ಇಡಬೇಕು, ಉಪಾಧ್ಯಾಯರು ಗೆರೆ ಎಳೆಯಬೇಕು. ನಾವು ದೂರದಿಂದ ತೆಗೆದುಕೊಳ್ಳಬೇಕು, ನಮ್ಮನ್ನು ಮುಟ್ಟುವುದು ಬಿಡಿ, ನಮಗೂ ಅವರಿಗೂ ವಸ್ತುಗಳ ಮೂಲಕ ಸಂಪರ್ಕ ಆಗಬಾರದು. ಹೇಗಿದ್ದರೂ ನಾವು ಶಾಲೆಗೆ ಹೋಗುವುದೇ ದೊಡ್ಡ ಸಂಗತಿ.

ಒಂದು ತಿಂಗಳ ನಂತರ ಒಬ್ಬ ಕ್ರಿಶ್ಚಿಯನ್ ಟೀಚರು ನಮ್ಮ ತರಗತಿಗೆ ಬಂದರು. ಶುಭ್ರವಾದ ಮಡಿಬಿಳಿಯಾದ ನಿಲುವಂಗಿದರಿಸಿದ್ದ ಇವರುಹತ್ತಿರ ಬಂದರೆ ಪೌಡರಿನ ಗಮ ಗಮ. ನಮ್ಮ ಸ್ಲೇಟನ್ನು ಕೈಯಲ್ಲಿ ತೆಗೆದುಕೊಂಡು ಸರಿಯಾಗಿ ನೋಡಿ, ಚೆನ್ನಾಗಿ ಬರದಿದ್ದೆ ಎಂದು ಬೆನ್ನು ತಟ್ಟುತ್ತಿದ್ದರು. ಕೊಳಕು ವಸ್ತ್ರ ಧರಿಸುತ್ತಿದ್ದ ಹಿಂದು ಉಪಾಧ್ಯಾಯರು ನಮ್ಮಿಂದ ದೂರ ನಿಂತರೆ, ಶುಭ್ರವಸ್ತ್ರ ಧರಿಸುವ ಕ್ರಿಶ್ಚಿಯನ್ ಟೀಚರು ಮುಟ್ಟಿ ಮಾತನಾಡುತ್ತಿದ್ದರು! ಇದೊಂದು ವಿಚಿತ್ರ, ನಮಗೊಂದು ಧೈರ್ಯ, ಸಂತೋಷ. ದೂರ ಇದ್ದ ಬೆಂಚು ಇತರ ಬೆಂಚುಗಳ ಹತ್ತಿರ ಬಂತು. ಇದರಿಂದ ಹೆದರಿದ ಇಬ್ಬರು ಶಾಲೆ ಬಿಟ್ಟರು. ಒಬ್ಬನೆ ಉಳಿದ ನನ್ನನ್ನು ಇತರ ಮಕ್ಕಳೊಂದಿಗೆ ಕುಳ್ಳಿರಿಸಿದರು. ಕೆಲವು ಇತರ ಮಕ್ಕಳು ಶಾಲೆ ಬಿಟ್ಟರು. ಇದರಿಂದಾಗಿ ಶಾಲೆಯಲ್ಲಿ ಬಿಸಿ ವಾತಾವರಣ ಉಂಟಾಯಿತು.

ನಮ್ಮ ಟೀಚರು ನಮ್ಮ ಮನೆಯ ದಾರಿಯಾಗಿಯೇ ಹೋಗಬೇಕು, ಬರಬೇಕು ; ನಮ್ಮ ಮನೆಯಲ್ಲಿ ನಾವು ಕೊಟ್ಟ ನೀರನ್ನು ಕುಡಿಯುತ್ತಿದ್ದರು. ನೀನು ಒಳ್ಳೆಯ ಹುಡುಗ, ಬಲು ಬುದ್ಧಿವಂತ ಎಂದು ತಮ್ಮ ಪುಟ್ಟ ಪೆಟ್ಟಿಗೆಯನ್ನು ನನ್ನ ಕೈಗೆ ಕೊಡುತ್ತಿದ್ದರು. ನಾನೆ ಮಾನಿಟರನಾದೆ. ಎಲ್ಲಾ ಮಕ್ಕಳ ಹೋಮ್‌ವರ್ಕ್ ನಾನೇ ನೋಡುವುದು, ನಾನು ಎಲ್ಲರ ಹಾಗಲ್ಲ, ನನಗೆ ನಮ್ಮ ಟೀಚರರಷ್ಟೇ ಗೌರವ.

ವರ್ಷ ಕಳೆಯಿತು, ನಾನು ಪಾಸಾಗಿ 2ನೇ ತರಗತಿಗೆ ಹೋದೆ. ಅಲ್ಲಿ ನನಗಾಗಿ ದೂರದಲ್ಲಿ ಒಂದು ಹಳೆ ಬೆಂಚು ಕಾಯುತ್ತಿತ್ತು. ಉಪಾಧ್ಯಾಯರು ಅದರಲ್ಲಿ ಕುಳಿತುಕೊಳ್ಳಲು ಹೇಳಿದರು. ನನ್ನ ಅಭಿಮಾನ ಅದರಲ್ಲಿ ಕುಳಿತುಕೊಳ್ಳಲು ಬಿಡಲಿಲ್ಲ. ನನ್ನ ಟೀಚರು ಶಾಲೆಗೆ ಬರಲೇ ಇಲ್ಲ. ಅದರಿಂದಾಗಿ ಶಾಲೆಗೆ ಬರುವ ಮಕ್ಕಳು ಕಡಿಮೆಯಾಗುವರೆಂದು ಅವರನ್ನು ಕೆಲಸದಿಂದ ತೆಗೆದು ಹಾಕಿದ್ದರಂತೆ. ನಾನು ಅಸ್ಪೃಶ್ಯನಷ್ಟೇ ಅಲ್ಲ ಅನಾಥನೂ ಆದೆ. ಆದರೆ ಅಭಿಮಾನ ಬಿಡಲಿಲ್ಲ : ಜಾತಿ ಭೂತದ ಶಾಲೆಯನ್ನು ಬಿಟ್ಟೆ.

'ಮಗೂ, ತುಂಬಾ ಕಲಿತು ದೊಡ್ಡ ಕೆಲಸಕ್ಕೆ ಹೋಗಬೇಕು' ಎಂದ ನನ್ನ ಟೀಚರ ಮಾತು ತಲೆಯಿಂದ ಹೋಗಲಿಲ್ಲ. ನಂತರ ನಮ್ಮ ಶಾಲೆಗೆ ಭೇಟಿ ನೀಡಿದ ಶ್ರೀ ಕೃಷ್ಣ BABT ಇನ್ಸ್‌ಪೆಕ್ಟರು ಹರಿಜನ ಮಕ್ಕಳು ಇಲ್ಲವೆಂದು ಬರೆದಿದ್ದರು. ನಮ್ಮ ಟೀಚರನ್ನೂ ಅವರ ಮಾತನ್ನೂ ಮರೆಯದೆ ಮೂರುವರೆ ಮೈಲು ದೂರ 'ಹರಿಜನ ವೆಲ್‌ಫೇರ್' ಶಾಲೆಗೆ ಸೇರಿ ಕಲಿತೆ. ಹಿಂದೂಗಳು ನಮ್ಮನ್ನು ಅವರ ಲಾಭಕ್ಕೆ ಮಾತ್ರ ಉಪಯೋಗಿಸುತ್ತಾರೆಂದು ನನಗೆ ತಿಳಿಯಿತು.

—ಬಿ. ಗೋವಿಂದ, ಕೋಟೇಶ್ವರ

## ಕೈಕಾಲು ಮುರಿದು ಕೂಲಿ ನಾಲಿಗೆ ಕಲ್ಲು

ದೇವರಾಜ ಅರಸರ ಹುಣಸೂರು ತಾಲ್ಲೂಕಿನ ಬಿಳಿಕೆರೆ ಹೋಬಳಿಯಲ್ಲಿ ಗಾಗೆನಹಳ್ಳಿ ಎಂಬುದು ಒಂದು ಕುಗ್ರಾಮ. ಅರಸು ಮತ್ತು ಒಕ್ಕಲಿಗರ ದಬ್ಬಾಳಿಕೆ ಇರುವ ಈ ಊರಲ್ಲಿ ಬೆಸ್ತರ ಜಾತಿಗೆ ಸೇರಿದ 3 ಕುಟುಂಬಗಳು ಕೂಲಿನಾಲಿ ಮಾಡಿಕೊಂಡು, ಜೀವನವನ್ನು ಕೈಲಿಡಿದುಕೊಂಡು ಬದುಕುತ್ತಿವೆ. ಇವುಗಳಲ್ಲಿ 40 ವಯಸ್ಸಿನ ಬೆಸ್ತ ವಿಧವೆ ಲಕ್ಷ್ಮಮ್ಮನು ಕೂಲಿನಾಲಿಮಾಡಿಕೊಂಡು ತನ್ನ ನಾಲ್ಕು ಮಕ್ಕಳನ್ನು ಸಾಕುವುದನ್ನೂ ಸಹಿಸದ ಮೇಲ್ಜಾತಿಯವರು ಈಕೆಯನ್ನು ಚಿವುಟು ಮುಳ್ಳಾಡಿಸುವಂತೆ ಆಡಿಸುತ್ತಿದ್ದಾರೆ. ಈಕೆ ಪ್ರಾಯಸ್ಥಳಾಗಿದ್ದಾಗ ಊರಿನ ದೊಡ್ಡ ಮನುಷ್ಯರೆಲ್ಲ ಲೈಗಿಂಕವಾಗಿ ಶೋಷಿಸಿ ಈಕೆಯನ್ನು ಇಪ್ಪೆಕಾಯಿ ಮಾಡಿದ್ದಾರೆ. ಹೀಗೆ ಊರಿನ ಎಲ್ಲ ಮುಖಂಡರ ಮುಖವಾಡಗಳ ಪರಿಚಯ ಇರುವ ಲಕ್ಷ್ಮಮ್ಮ ಈಗ ಕೂಲಿನಾಲಿ ಮಾಡಿಕೊಂಡು ಸ್ವಾಭಿಮಾನದ ಬದುಕು ಬದುಕುತ್ತಿರುವುದು ಇವರಿಗೆ ನುಂಗಲಾರದ ತುತ್ತಾಗಿದೆ.

ಅನೇಕ ಸಾರಿ ರಾಜಬೀದಿಯಲ್ಲಿಯೋ ಈಕೆಯನ್ನು ಊರಿನ ಛೇರ್ಮನ್ ಆದಿಯಾಗಿ ದೈಹಿಕವಾಗಿ ಥಳಿಸಿರುವುದುಂಟು. ಈ ಕಿರುಕುಳಗಳನ್ನು ಸಹಿಲಾರದೆ ಈಕೆ ಎಲ್ಲ ಹಂತದ ಅಧಿಕಾರಿಗಳಿಗೂ ದೂರಿತ್ತು ಊರಿನ ದೊಡ್ಡ ಮನಷ್ಯರಿಗೆ ಸವಾಲಾಗಿದ್ದಾಳೆ.

ಆದರೆ ಈಕೆಯ ಸವಾಲನ್ನು ಶಾಶ್ವತವಾಗಿ ಇಲ್ಲವಾಗಿಸಲು ಊರದೊಡ್ಡವರು ತಾ॥ 1-10-84 ,ರಂದು ಅಣಿಯಾದರು. ಯಾವುದೋ ಕೆಲಸಕ್ಕೆಂದು ಮೈಸೂರಿಗೆ ಹೋಗಿದ್ದ ಲಕ್ಷ್ಮಮ್ಮ ಸಾಯಂಕಾಲ ವಾಪಸ್ಸು ಊರಿಗೆ ಬರುತ್ತಿದ್ದಂತೆ ಗ್ರಾಮದ ಉಯ್ಲೆಗೌಡ, ರಾಮಕೃಷ್ಣ ಇತ್ಯಾದಿಗಳು ಅಡ್ಡಹಾಕಿ "ಬೋಸುಡಿ ನೀನು ನಮ್ಮ ಮೇಲೆ ಪೋಲೀಸರಿಗ್ಯಾಕೆ ದೂರು ಕೊಟ್ಟೆ?" ಇತ್ಯಾದಿ ಬೈಯುತ್ತಾ ದನಬಡಿದಂತೆ ಬಡಿದು ಕೈಕಾಲನ್ನು ಮುರಿದು ಹಾಕಿದರು. ಅನುಕಂಪಪಟ್ಟ ದಾರಿಹೋಕರೊಬ್ಬರು ಬಿಡಿಸದಿದ್ದರೆ ಲಕ್ಷ್ಮಮ್ಮ ಇಷ್ಟೊತ್ತಿಗೆ ಸತ್ತಿರುತ್ತಿದ್ದಳು.

ಈಗ ಮೈಸೂರಿನ ಕೆ. ಆರ್ ಆಸ್ಪತ್ರೆಯಲ್ಲಿ ಕೈಕಾಲು ಕಳೆದುಕೊಂಡು ಮಕ್ಕಳ ಗಂಜಿ ನೀರಿನ ಬಗ್ಗೆ ಯೋಚಿಸುತ್ತಿರುವ ಲಕ್ಷ್ಮಮ್ಮನಿಗೆ ದಲಿತ ಸಂಘರ್ಷ ಸಮಿತಿ ಆಸರೆಯಾಗಿದೆ. ಈಕೆಯ ಕೈಕಾಲು ಮುರಿದ ಊರ ಒಡೆಯರ ಕೈಕಾಲು ಮುರಿಯುವ ಕಾರ್ಯಕ್ರಮವನ್ನೂ ಹಾಕಿಕೊಳ್ಳಲಾಗುತ್ತಿದೆ.

—ನಾಗರಾಜ್ ಕುಪ್ಪೆ

## ಸಾಮಾನ್ಯ ಸ್ಥಿತಿ

ಉನ್ನತಿಯ ಶಿರಕ್ಕೇರೆ ಹಿತವಲ್ಲ;
ಉರಿಗೆ ಕೈ ಚಾಚುವುದು ಸರಿಯಲ್ಲ ;
ನಾಕದಾವಾಸಕ್ಕೆ ಏಣಿಯಿಲ್ಲ ;
ಅದ ಹೊರಲು, ಹೊರೆಮಾತ್ರ, ಸುಖವಿಲ್ಲ ;
ಹೆಮ್ಮರಕೆ ಬಿರುಗಾಳಿ ಏಟಿಲ್ಲ ;
ಅದರಡಿಯ ಗುಡಿಸಲಿಗೆ ಅಲೆಯಿಲ್ಲ.
ಮೇಲಿರದೆ ಕೆಳಗಿರದೆ ನಡುವಲ್ಲಿ
ವಾಸಕ್ಕೆ ಮನೆಮಾಡು ಗಿರಿಯಲ್ಲಿ.
'ನಿಜಸಿರಿಗೆ ಹಗೆ ಕರುಬುವಂತಿಲ್ಲ ;
ಬಡತನಕ್ಕೆ ಸುಖ ಕೊರಗುವಂತಿಲ್ಲ ;
ಎನುವಂತ ಸಾಮಾನ್ಯ ತೆರದಲ್ಲಿ
ಇರುತಿರಲು ಅದೇ ಸಾಕು ಜಗದಲ್ಲಿ !

— ಥಾಮಸ್ ನ್ಯಾಪ್

ಅನು : ಬಸವರಾಳು ಶ್ರೀಕಂಠಯ್ಯ

# ತುಮಕೂರಿನ ಹಾಸ್ಟೆಲ್‌ಗಳು : ಕೊಳಕು ವ್ಯವಸ್ಥೆ ಗೂಂಡಾಗಿರಿಗಳ ತಾಣ

ನಾಲ್ಕು ಜನರಿರುವ ಸಂಸಾರ ವಾಸಿಸಲು ಸಾಕಾಗುವಷ್ಟು ಹೆಂಚಿನ ಮನೆ. 8x8 ಅಡಿಯ 2ಕೊಠಡಿಗಳು. 10x15 ಅಡಿಯ ಒಂದು ನಡುಮನೆ. ಹೊರಗಡೆ ಒಂದು ಸೇದುವ ಬಾವಿ. ಪಕ್ಕದಲ್ಲೇ 4 ಹಳೇ ಜಿಂಕ್ ಷೀಟ್ ಹಾಕಿ ಮಾಡಿದ ಆಸರೆ ಕೆಳಗೆ ತೋಡಿ ಮಾಡಿದ ಗ್ವಾಂದಿಗೆ ಒಲೆ. ಇದೇ ಅಡಿಗೆ ಸಾಲೆ. 8 ಅಡಿ ಕೋಣೆ ಒಂದರಲ್ಲಿ ದಿನಸಿ. ಇನ್ನೊಂದರಲ್ಲಿ ಸೌದೆ ಇತ್ಯಾದಿ.15x10ರ ಕೋಣೆಯಲ್ಲಿ ಅಡಿಗೆ ಬೇಯಿಸಿ ಇಳಿಸಿದ ಪಾತ್ರೆಗಳು. ಒಂದು ಮೂಲೆಯಲ್ಲಿ ದವಸ ಮಾಡುತ್ತಿರುವ ಹೆಂಗಸರು. ಇನ್ನೊಂದು ಮೂಲೆಯಲ್ಲಿ ಹಾಸಿದ ಊಟದ ಚಾಪೆ. ಹೆಚ್ಚೆಂದರೆ 10 ಜನ ಒಂದು ಬಾರಿಗೆ ಕೂತು ಊಟ ಮಾಡಬಹುದು. ಬಾವಿ ಪಕ್ಕದಲ್ಲಿ ತಟ್ಟೆ ಇತ್ಯಾದಿ ತೊಳೆದ ನೀರು ಹರಿದು ಕೆಸರಾಗಿದೆ. ಅಲ್ಲೇ ಮೊಣಕಾಲುಗಳೆರಡನ್ನು ಒತ್ತಿಹಿಡಿದು ಮೇಲೆತ್ತಿ ಸಿಕ್ಕಿಸಿದ ಪ್ಯಾಂಟ್ ಬೀಳದಂತೆ ನಿಂತು ಕೈಯಲ್ಲೇ ತಟ್ಟೆ ಹಿಡಿದು ಇಬ್ಬಬ್ಬರು ಊಟ ಮಾಡುತ್ತಿದ್ದರು. ಒಳಗೂ ಅಷ್ಟೇ ರೊಚ್ಚಾಗಿ ಕುಕ್ಕರುಗಾಲಲ್ಲೇ ಕೂತು ಊಟ ಮಾಡುವ ಹುಡುಗರು. ದವಸ ಮಾಡುವವರು ಕೇರಿದ ದೂಳೂ ಊಟದ ಜೊತೆಗೇ ಸೇರುತ್ತಿತ್ತು. ಈ ವ್ಯವಸ್ಥೆಯಲ್ಲಿರುವ ಹಾಸ್ಟೆಲ್ ಎನಿಸಿಕೊಳ್ಳುವ ಕಟ್ಟಡದಲ್ಲಿ 240 ಜನ ವಿದ್ಯಾರ್ಥಿಗಳು ಊಟ ತಿಂದು ಚದುರಿ ಹೋಗುತ್ತಾರೆ. ಯಾಕ್ರಪ್ಪಾ ಹಿಂಗೆ ನಿಂತು ತಿಂತೀರ, ತಡ ಆದ್ರೂ ಆಗ್ಲಿ ಒಬ್ಬರಾದ ಮೇಲೊಬ್ಬರಂತೆ ತಿನ್ನಿರಿ ಅಂದ್ರೆ- ಕ್ಲಾಸಿಗೆ ಹೊತ್ತಾಗುತ್ತೆ ಅಂತಾರೆ. ಎಲ್ಲಿ ಉಳಿದು ಕೊಂಡಿದ್ದೀರಾ ? ಎಲ್ಲೋ ಇದ್ದೀವಿ ಬಿಡಿಸಾರ್; ನೀವು ಅಲ್ಲೆಲ್ಲ ಬಂದ್ರೆ, ನೀವು ಸಂಘದವರು ಅಂತ ಅಲ್ಲೆಲ್ಲಾರು ಜಾತಿ ಗೊತ್ತಾಗಿ ನಮ್ಮನ್ನು ರೂಂ ಬಿಡಿಸ್ತಾರೆ, ಏನೂ ತಿಳ್ಕೊ ಬ್ಯಾಡಿ' ಅಂದ್ರು. ಇಲ್ಲ ಬರಲ್ಲ ಅಂದು ಸಮಾಧಾನ ಮಾಡಿದೆ.

ಇದು ತುಮಕೂರಿನಲ್ಲಿ ಕಾಲೇಜು ವಿದ್ಯಾರ್ಥಿಗಳು ಇರುವ ವ್ಯವಸ್ಥೆ. ಹೆಚ್ಚೂ ಕಡಿಮೆ ಈ ವ್ಯವಯನ್ನೇ ಹೋಲುವ ಎಂಟು ಊಟ ಹಾಕುವ ಕೇಂದ್ರಗಳು (ಮೆಸ್‌ಗಳು) ತುಮಕೂರಿನಲ್ಲಿವೆ. ಸುಮಾರು 2 ಸಾವಿರ ವಿದ್ಯಾರ್ಥಿಗಳು ಈ ರೀತಿ ಇದ್ದಾರೆ. ಊಟದ್ದೋ ಅವ್ಯವಸ್ಥೆಯ ಆಗರ. ಪ್ರಶ್ನಿಸುವ ವಿದ್ಯಾರ್ಥಿಗಳನ್ನು ವಾರ್ಡನ್‌ಗಳು ಸಾಕಿ ಕೊಂಡಿರುವ ಗೂಂಡಾಗಳಿಂದ ಬಾಯಿ ಮುಚ್ಚಿಸುತ್ತಾರೆ. ಲಕ್ಷಾಂತರ ರೂ ಬಾಡಿಗೆ ರೂಪದಲ್ಲಿ ಮನೆಗಳ ಮಾಲೀಕರಿಗೆ ಕೊಟ್ಟು ಸರ್ಕಾರದ ಹಣ ಪೋಲು ಮಾಡುವ ಬದಲು ಅದೇ ಹಣದಲ್ಲಿ ಈ ವೇಳೆಗೆ ಹಾಸ್ಟೆಲ್ ಕಟ್ಟಡ ಕಟ್ಟಿಸಬಹುದಿತ್ತು.

ಒಬ್ಬ ತಾಯಿಗೆ ಒಬ್ಬಳೇ ಮಗಳು. ಅಪ್ಪನಿಲ್ಲದ ಮಗಳನ್ನು ಓದಿಸಬೇಕೆಂದು ತುಮಕೂರಿನ ಹುಡುಗಿಯರ ಹಾಸ್ಟೆಲ್‌ಗೆ ಸೇರಿಸಿದ್ದಳು. 9 ನೇ ತರಗತಿ ಓದುತ್ತಿದ್ದ ಈ ಹುಡುಗಿಯ ತಾಯಿ ಇದ್ದಕ್ಕಿದ್ದಂತೆ ಬಂದು ಊರಿಗೆ ಕರಕೊಂಡು ಹೋದಳು. ಈಗ 6 ಮೈಲಿ ದಿನಾ ಓಡಾಡುತ್ತಾ ಶಾಲೆಗೆ ಹೋಗುತ್ತಿದ್ದಾಳೆ. ಈ ಹುಡುಗಿ ಶಾಲೆಯಲ್ಲಿ ಉಪಾಧ್ಯಾಯರುಗಳ ಎದುರೇ ಗೂಂಡಾಗಳಿಂದ ಹಲ್ಲೆ

**ವರದಿ : ರಂಬೆ**

ಗೊಳಗಾಗಿದ್ದಳು. ಮತ್ತೊಂದು ಬಾರಿ, ಹಾಸ್ಟೆಲ್‌ನ ಅಡಿಗೆ ಕೋಣೆಯಲ್ಲೇ ಈ ಹುಡುಗಿಯರನ್ನೂ ''ಹಿಂದಿನ ಸಾರಿ ಹಾಸ್ಟೆಲ್ ಬಿಟ್ಟು ಹೋದ ಹುಡುಗಿಯರ ಕಥೆ ಗೊತ್ತಿದೆಯಾ (ಇಲ್ಲಿಯೂ 'ಹುಡುಗಿಯರನ್ನು ಹೊಡೆದು ಓಡಿಸಲಾಗಿತ್ತು) ನಿಮಗೂ ಅದೇ ಗತಿ' ಎಂದು ಬೆದರಿಕೆ ಜೊತೆಗೆ ರಾತ್ರಿ ಹಾಸ್ಟೆಲ್‌ಗೆ ನುಗ್ಗಿ ಅತ್ಯಾಚಾರ ಮಾಡುತ್ತೇವೆಂದೂ ಬೆದರಿಕೆ ಹಾಕಿದ್ದರು. ಕಾರಣ ಈ ಹುಡುಗಿಯರು ಊಟ ಸರಿಯಾಗಿಲ್ಲವೆಂದು ಪ್ರಶ್ನಿಸಿದ್ದು. ದಿನಸಿ ಕದಿಯುವ ಅಡಿಗೆಯವರ ಮತ್ತು ವಾರ್ಡನ್‌ರವರನ್ನು ಪತ್ತೆ ಹಚ್ಚಿದ್ದು.

ಐದನೇ ತರಗತಿಯ ಹುಡುಗಿ ಎದೆನೋವಿನಿಂದ ಆಸ್ಪತ್ರೆ ಸೇರಿದ್ದಳು. ಡಾಕ್ಟರ್‌ರು ಹುಡುಗಿಗೆ ಭಾರ ಹೊರಿಸುವುದನ್ನು ನಿಲ್ಲಿಸಿ ಎಂದು ಅಪ್ಪನಿಗೆ ಸಲಹೆ ಮಾಡಿದ್ದರು. ಆಗಲೇ ತಿಳಿದದ್ದು ಹಾಸ್ಟಲಿನ ನೌಕರರು ಇದ್ದಿಲು ತಟ್ಟೆಯನ್ನು ಆ ಹುಡುಗಿಗೆ ಹೊರಿಸುವುದು ಅದರೊಳಗೆ ದವಸ ಸಾಗಿಸುವುದು. ಸರಿ. ಅಪ್ಪ ಅಕ್ಕ ಮಹಿಳಾ ವಾರ್ಡನ್‌ನನ್ನು ಕೇಳಿದರು. ಅವರು ಅಡಿಗೆ ನೌಕರರಿಂದಲೇ ಅಕ್ಕನ ಮೇಲೆ ಹಲ್ಲೆ ಮಾಡಿಸಿದರು. ಈ ವಿಷಯವನ್ನು ಪರಿಶಿಷ್ಟ ಜಾತಿ ಇಲಾಖೆ ಜಿಲ್ಲಾಧಿಕಾರಿಗಳಿಗೆ ದೂರಿದರು, ಆದರೆ ಜಿಲ್ಲಾಧಿಕಾರಿಗಳು "ನಿವ್ಯಾಕೆ ಹಾಸ್ಟಲಿನೊಳಕ್ಕೆ ಹೋದಿರಿ" ಮುಂತಾಗಿ ದಬಾಯಿಸಿ ಬೈದು ಕಳಿಸಿದರು.

ಇವೆಲ್ಲ ತುಮಕೂರಿನಲ್ಲಿರುವ ಹೈಸ್ಕೂಲ್ ಹುಡುಗಿಯರ ಸರ್ಕಾರಿ ಹಾಸ್ಟಲ್‌ನಲ್ಲಿ ನಡೆಯುತ್ತಿರುವುದರ ತುಣುಕುಗಳು ಮಾತ್ರ. ಇಂಥದರ ಬಗ್ಗೆ ಪರಿಶಿಷ್ಟ ಜಾತಿ ಜಿಲ್ಲಾ ಅಧಿಕಾರಿಗಳನ್ನು ನಾವು ಮಾತನಾಡಿಸಿದಾಗ "ನಾವು ಕ್ಲಾಸ್ ಫೋರ್ ಅಫಿಷಿಯಲ್ಸ್‌ನ ಎದುರಾಕ್ಕೊಬಾರದು ಮಕ್ಕಳು ಮರಿ ಹಾಕ್ಕೊಂಡು ಆಫೀಸ್ ಮುಂದೆ ಕುತ್ಕೋತಾರೆ. ಏನು ಮಾಡೋಕ್ಕಾಗುತ್ತೆ. ಅಡ್ಜೆಸ್ಟ್ ಮಾಡಿಕೋಬೇಕು" ಅಂದಿದ್ದರು. ಹಾಸ್ಟಲ್ ಕಾವಲುಗಾರನೊಂದಿಗೆ ಒಂದು ದಿನ ಮಾತಾಡಿದಾಗ "ನೀನು ಸರಿಯಾಗಿದ್ದರಲ್ಲವೇ ಸ್ವಾಮಿ ನಾನು ನಿನ್ನ ಮಾತು ಕೇಳೋದು, ಅರ್ಥ ಮಾಡಿಕ ಹೋಗಿ" ಅಂದ.

ಕಾಲೇಜು ಹುಡುಗಿಯರಿಗಂತೂ ಇಲ್ಲಿ ಹಾಸ್ಟೆಲ್ ವ್ಯವಸ್ಥೆ ಇಲ್ಲವೇ ಇಲ್ಲ. ದಲಿತ ಹುಡುಗಿಯರ ಹೈಸ್ಕೂಲ್ ಹಾಸ್ಟಲ್‌ನಲ್ಲೇ ನಾಲ್ಕೈದು ಕೊಠಡಿ ಬಿಡಿಸಿಕೊಂಡು ಹಿಂದುಳಿದ ವರ್ಗದ ಕಾಲೇಜು ಹುಡುಗಿಯರ ಹಾಸ್ಟಲ್ ನಡೆಸುತ್ತಿದ್ದಾರೆ. ಅಲ್ಲಿ 4 ಜನ ಪರಿಶಿಷ್ಟ ಜಾತಿ ಹುಡುಗಿಯರಿಗೆ ಪ್ರವೇಶ. ದಲಿತ ಕಾಲೇಜು ಹುಡುಗಿಯರಿಗೆ ಅಲ್ಲಿ ಹಾಸ್ಟಲ್ ನಡೆಸಲು ಕೇಳಿದ್ದ ಎಲ್ಲ ಮನವಿಗಳು ಮಲತಾಯಿ ಧೋರಣೆಯ ಅಧಿಕಾರಿಗಳ ಕಿವುಡು ಕಿವಿಗಳಲ್ಲೆ ಉಳಿದಿವೆ.

ಇಂಥ ಅನೇಕ ಸಮಸ್ಯೆಗಳನ್ನು ಮುಂದಿಟ್ಟು ಹಾಸ್ಟಲ್ ಕಟ್ಟಡಗಳನ್ನು ಕಟ್ಟಿಸಬೇಕೆಂದು 27–9–84ರಂದು ದಲಿತ ವಿದ್ಯಾರ್ಥಿ ಒಕ್ಕೂಟದ ಎರಡು ಸಾವಿರ ವಿದ್ಯಾರ್ಥಿಗಳು ಮೆರವಣಿಗೆ ನಡೆಸಿದರು. ಈ ಕೆಳಕಂಡ ಬೇಡಿಕೆಗಳನ್ನು ಶೀಘ್ರವೇ ಈಡೇರಿಸದಿದ್ದಲ್ಲಿ ನಿರಂತರ ಹೋರಾಟ ನಡೆಸುತ್ತೇವೆಂದು ಸರ್ಕಾರಕ್ಕೆ ಎಚ್ಚರಿಕೆ ನೀಡಿದ್ದಾರೆ.

**ಬೇಡಿಕೆಗಳು :**

1) ತುಮಕೂರು ಜಿಲ್ಲಾ ಕೇಂದ್ರದಲ್ಲಿ ಎರಡು ಸಾವಿರಕ್ಕೂ ಹೆಚ್ಚು ದಲಿತ ವಿದ್ಯಾರ್ಥಿ (ಹೈಸ್ಕೂಲು) ವಿಸ್ತರಿಸಿ ಹೆಚ್ಚು ವಿದ್ಯಾರ್ಥಿಗಳಿಗೆ ಸೌಲಭ್ಯ ಒದಗಿಸಬೇಕು.

2) ಹಾಸ್ಟಲ್‌ಗಳಲ್ಲಿ ನಡೆಸುವ ಅವ್ಯವಹಾರ ಮತ್ತು ಗೂಂಡಾಗಿರಿಯನ್ನು ನಿಲ್ಲಿಸಬೇಕು.

# ಒಲಂಪಿಕ್ಸ್ : ಮಾರ್ಟಿನ್ ಲೂಥರ್ ಕಿಂಗ್‌ನ ಕನಸು

ಮಸ್ಕಾರ,

ಸೆಪ್ಟೆಂಬರ್ 20, 1984ರ 'ಪಂಚಮ' ಪತ್ರಿಕೆ ುಲ್ಲಿ 'ಒಲಂಪಿಕ್ಸ್ ಚರಿತ್ರೆ: ಕಪ್ಪು ಒಂದೇ ನುಕುಲದ ಭರವಸೆ' ಲೇಖನ ಓದಿದೆ.

ವರ್ಣಾಂಧರ, ಜಾತ್ಯಾಂಧರ ಕಣ್ಣು ತೆರೆಸುವ, ನುಷ್ಯರಾದವರ ಹೃದಯಕ್ಕೆ ತಾಗುವ ಲೇಖನ ದು.

ಇತ್ತೀಚೆಗೆ ಒಲಂಪಿಕ್ಸ್ ಮುಗಿದ ನಂತರ ಈ ೇಖನ ನನ್ನ ಕೈಗೆ ಸಿಕ್ಕಿತು. ಆಗ ನನ್ನ ಮನಸ್ಸನ್ನು ುತ್ತಿದ್ದು ಬಿಳಿಯರ ಕ್ರೂರ ವರ್ತನೆ. ತಮ್ಮ ೋಟಗಳಲ್ಲಿ ಹಗಲಿಡೀ ದುಡಿಸಿಕೊಂಡು ಕಪ್ಪು ನರಲ್ಲಿ ದೈನ್ಯವನ್ನೂ ಕೀಳರಿಮೆಯನ್ನೂ ಮೂಡಿ ಲು ಅವರು ನಡೆಸಿದ ಯತ್ನ.

ಆದರೆ ವರ್ಣಾಂಧರಿಗೆ ಇನ್ನೂ ಮನವರಿಕೆ ಯಾದಂತಿಲ್ಲ. ಇದುವರೆಗೆ ಒಲಂಪಿಕ್ಸ್‌ನಲ್ಲಿ ಅಮೆ ಕಾ ಗಳಿಸಿರುವ ಪ್ರಶಸ್ತಿಗಳಲ್ಲಿ ಬಹುಪಾಲು ಭಾಗ ಪ್ಪು ಜನರು ಗಳಿಸಿರುವುದೇ ಆಗಿದೆ.

ನೆಲದಲ್ಲಿ ಬೆಳೆ ತೆಗೆದು ಸಾಕುವವರು ಕಪ್ಪು ಜನ ಾಗಿರುವಂತೆ, ಅಂತರ್ರಾಷ್ಟ್ರೀಯ ಪಂದ್ಯದಲ್ಲಿ ್ರಶಸ್ತಿಗಳಿಸಿ ಹೆಮ್ಮೆ ತರುವವರೂ ಕಪ್ಪು ಜನರೇ.

34 ವರ್ಷಗಳ ಹಿಂದೆ ಅಮೆರಿಕಾದಲ್ಲಿ ಒಲಂ ಕ್ಸ್ ನಡೆದಾಗ ಕಿರಿಯ ಮಾರ್ಟಿನ್ ಲೂಥರ್ ಂಗ್ ಎರಡೂವರೆ ಲಕ್ಷ ಕಪ್ಪು ಜನರ ಪ್ರದರ್ಶನ ಡೆಸಿದ್ದರು. ಅವರು ಅಂದು ಉಸುರಿದ ನುಡಿ ಳು ಇಂದಿಗೂ ನೋವು ಹೆರುತ್ತಿವೆ:

"ಕಪ್ಪು ಜನ ಇಂದಿಗೂ ಗುಲಾಮಗಿರಿಯಲ್ಲಿ ೇಯುತ್ತಿದ್ದಾರೆ. ಅವರನ್ನು ದೂರವಿಟ್ಟ ಪರಿಣಾಮವಾಗಿ ಅವರ ಹಾಗೂ ಬಿಳಿ ಸಮಾಜದ ಜನ ಜೀವನ ಚಲನೆ ಕಳೆದುಕೊಂಡಿದೆ."

"ಆದರೆ ನನ್ನ ಕಣ್ಣಲ್ಲಿ ಕನಸೊಂದು ಮೂಡಿದೆ. ಮುಂದೆ ಒಂದು ದಿನ ಮಾಜಿ ಬಿಳಿ ಜನರ ಮಕ್ಕಳು ಮಾಜಿ ಗುಲಾಮರ ಮಕ್ಕಳು ಒಬ್ಬರನ್ನೊಬ್ಬರು ಪ್ರೀತಿ-ವಿಶ್ವಾಸಗಳಿಂದ ಅಪ್ಪಿಕೊಳ್ಳಬೇಕು ; ಇವರ ಹೃದಯಗಳು ಒಂದಾಗಬೇಕು......."

ಇಂದು ಒಲಿಂಪಿಕ್ಸ್‌ನಲ್ಲಿ ಕಪ್ಪು ಜನರು ಹಾಗೂ ಬಿಳಿಯರು ಒಂದಾಗಿ ಆಟಪಾಡುತ್ತಾರೆ. ಆದರೆ

---

ಮಂಗ್ಳೂರ ವಿಜಯ

---

ಇಬ್ಬರ ಮನಸ್ಸುಗಳು ಒಂದಾಗಿವೆಯೇ?

ಒಲಿಂಪಿಕ್ಸ್ ಪ್ರಾರಂಭದಲ್ಲಿ ಕಪ್ಪು ಆಟಗಾರ ತೋರಿದ ಹೆಮ್ಮೆಯ ಪ್ರದರ್ಶನಕ್ಕೆ ಎಂಥ ಸ್ವಾಗತ ದೊರೆಯಿತು! ದೂರದರ್ಶನದಲ್ಲಿ ಈ ದೃಶ್ಯ ಕಂಡು ನನ್ನ ಎದೆ ಹೆಮ್ಮೆ-ಸಂತೊಷಗಳಿಂದ ಬಿರಿಯಿತು.

ಆದರೆ! ಮರುಕ್ಷಣ ನಿರ್ವಿಣ್ಣನಾದೆ. ನಾಚಿಕೆ ಹಾಗೂ ಯಾತನೆ ನನ್ನನ್ನು ಇರಿದವು. ಇಡೀ ದೇಹ ಮನಸುಗಳನ್ನು ಯಾರೋ ತುಂಡು ಮಾಡಿ ಎಸೆದ ಅನುಭವ. ಅಪಮಾನದಿಂದ ಮುಖ ಮುಚ್ಚಿಕೊಂಡೆ.

## ಪ್ರತಿಕ್ರಿಯೆ

ದೂರದರ್ಶನದ ದೃಶ್ಯದಲ್ಲಿ ಬಿಳಿಯರು ಬಿಳಿ ಆಟಗಾರರನ್ನು ಅಪ್ಪಿಕೊಳ್ಳುತ್ತಿದ್ದರು ; ಕೈಕುಲುಕುತ್ತಿದ್ದರು, ಎತ್ತಿ ಹಿಡಿದು ಕೇಕೆ ಹಾಕುತ್ತಿದ್ದರು.

ಒಂದೆರಡು ಕ್ಷಣ ಕಪ್ಪು ಆಟಗಾರರು ಮೌನದಿಂದ ಒಂದು ಬದಿಯಲ್ಲಿ ನಿಂತರು. ಅನಂತರ ಬಂದ ಕಪ್ಪು ಜನ ಕಪ್ಪು ಆಟಗಾರರನ್ನು ಮುತ್ತಿದರು; ಮೇಲಕ್ಕೆತ್ತಿ ಸಂತೋಷಪಟ್ಟರು. ಆದರೆ ಕಪ್ಪು ಆಟಗಾರರ ಕಣ್ಣ ಆಳದಲ್ಲಿ ನನಗೆ ಅಪಮಾನದ ಬೇಗೆ ಕಾಣುತ್ತಿತ್ತು.

ಪ್ರತಿ ಆಟದಲ್ಲಿ ಜೊತೆ-ಜೊತೆಗೆ ಕಪ್ಪು ಹಾಗೂ ಬಿಳಿ ಎಂಬ ಯಾವ ಭೇದವಿಲ್ಲದೇ ಆಡಿದರು; ಕೊನೆಗೆ ವರ್ಣಭೇದ ತಲೆ ಎತ್ತಿತ್ತು ಬಿಳಿಯರ ಹೃದಯ ತನ್ನ ನೈಜಬಣ್ಣ ಪ್ರದರ್ಶಿಸಿತ್ತು.

ಈ ಬಾರಿಯ ಒಲಂಪಿಕ್ಸ್‌ನಲ್ಲಿ ಕಪ್ಪು ಆಟಗಾರರು ಗಳಿಸಿರುವ ಪದಕಗಳು ಒಟ್ಟು 97. ಇವುಗಳಲ್ಲಿ 48 ಸ್ವರ್ಣ. ಕಪ್ಪು ಜನರನ್ನು ದೂರ ತಳ್ಳುವ ಹೃದಯ ಹೀನ ಅಮೆರಿಕಾ ಅವರ ಸಾಧನೆಯನ್ನು ಮಾತ್ರ ತನ್ನ ತಲೆಗೆ ಗರಿಯಾಗಿ ಸಿಕ್ಕಿಸಿಕೊಂಡಿದೆ.

ಬಾಕ್ಸಿಂಗ್‌ನಲ್ಲಿ ವಿಶ್ವದಲ್ಲೆ ಹೆಸರು ಮಾಡಿದ ಮಹಮ್ಮದ್ ಅಲಿ, ಬರ್ಲಿನ್ (1936)ನಲ್ಲಿ ಹಲವು ಪದಕಗಳನ್ನು ಗಳಿಸಿ ಕಪ್ಪು ಆಟಗಾರರು ಹಿಟ್ಲರನ ವರ್ಣ ಶ್ರೇಷ್ಠತೆಯನ್ನು ಗಾಳಿಗೆ ತೂರಿದ್ದಾರೆ. ಪ್ರತಿಭೆಯನ್ನೂ ವರ್ಣ, ಜನಾಂಗ ಅಥವಾ ಹುಟ್ಟಿಗೆ ಆರೋಪಿಸುವುದು ಅನ್ಯಾಯವಷ್ಟೇ ಅಲ್ಲ, ಮೂರ್ಖತನವೂ ಹೌದು ಎಂಬುದನ್ನು ಕಪ್ಪು ಆಟಗಾರರು ಸಿದ್ಧಪಡಿಸಿದ್ದಾರೆ.

---

3) ಜಿಲ್ಲಾದ್ಯಂತ ಕಾಲೇಜು ಇರುವ ಕಡೆ ಲ್ಲ, ಹಾಸ್ಟಲ್ ಕಟ್ಟಿಸಬೇಕು.

4) ಕಾಲೇಜು ವಿದ್ಯಾರ್ಥಿನಿಯರಿಗೆ ತುಮ ೂರಿನಲ್ಲಿ ಹಾಸ್ಟಲ್ ಕಟ್ಟಿಸಬೇಕು.

ಅ) ಅದುವರಗೆ ಹಿಂದುಳಿದ ಪಂಗಡದ ಾಸ್ಟಲ್‌ನಲ್ಲಿ ಎಲ್ಲ ದಲಿತ ವಿದ್ಯಾರ್ಥಿನಿಯರಿಗೆ ್ರವೇಶ ಕೊಡಬೇಕು.

ಆ) ಇಲ್ಲವಾದಲ್ಲಿ ತಕ್ಷಣ ಹೈಸ್ಕೂಲ್ ಾಸ್ಟಲ್ ಕಟ್ಟಡದಲ್ಲಿ ಕಾಲೇಜು ಕಟ್ಟಡದಲ್ಲಿ ಾಲೇಜು ದಲಿತ ವಿದ್ಯಾರ್ಥಿನಿಯರಿಗೆ ಹಾಸ್ಟಲ್ ಡೆಸಬೇಕು.

5) ಎ. ಕೆ. ಬೋರ್ಡಿಂಗ್ ಹೋಂ ಗೆ ಸೌಲಭ್ಯವಿರುವಂತೆ ಹಾಸ್ಟಲ್ ಕಟ್ಟಿಸಬೇಕು.

## ಮಾರೀಚ ಮಾಯೆ....

(4ನೇ ಪುಟದಿಂದ)

ದಂತೋಷ್ಠಿ' 'ಪರಮಾಂಗನೆ' 'ಶುಭಲೋಚನೆ' 'ಅನವದ್ಯಾಂಗಿ' 'ಸುಶ್ರೋಣಿ; ಮತ್ತೆ ಜಿಂಕೆಯಂತೆಯೇ ಚಿನ್ನದ ವರ್ಣವುಳ್ಳವಳು. ಕೃತಕ ಗಂಡು ಜಿಂಕೆಯಿಂದ ಸೀತೆ ಪ್ರಲೋಭಿತಳಾದರೆ, ಸೀತೆಯಿಂದ ಪ್ರಲೋಭಿತನಾಗುವವನು, ರಾವಣ. ಜಿಂಕೆಯನ್ನು ಬಯಸಿ, ಸೀತೆ, ರಾವಣನಿಂದಪಹೃತಳಾಗಿ ದಾರುಣವಾದದ್ದನ್ನು ಅನುಭವಿಸಿದರೆ, ಸೀತೆಯನ್ನು ಬಯಸಿ ರಾವಣ ಮರಣವನ್ನೇ ಹೊಂದಬೇಕಾಗುತ್ತದೆ. ಮಾರೀಚ ಮಾಯೆ ಸೀತೆಗೆ ಪ್ರಲೋಭನ ; ದೇವತೆಗಳ ಮಾಯೆ (ಸೀತೆ) ರಾವಣನಿಗೆ ಪ್ರಲೋಭನ.(ರಾವಣ ವಧೆ, ರಾಕ್ಷಸ ನಾಶಕ್ಕಾಗಿಯೆ ರಾಮ ಸೀತೆ ಲಕ್ಷ್ಮಣ ಮತ್ತು ವಾನರರ ಜನ್ಮ ಎಂಬ ರಾಮಾಯಣದ ಮೂಲೋದ್ದೇಶವನ್ನು ಗಮನಿಸಿ.)

ಕಾಂಚನ ಮೃಗದ ಕೃತಕತೆಯೆದ್ದು ತೋರುವಂತೆ, ವಾಲ್ಮೀಕಿ ಅದ್ಭುತವಾಗಿ ವರ್ಣಿಸಿದ್ದಾನೆ. ಆದರೆ, ಅದನ್ನು ಕಂಡ ತಕ್ಷಣ ಅವರ ಕೃತಕತೆಯನ್ನು ಗುರುತಿಸುವವನು, ಲಕ್ಷ್ಮಣ ಎನ್ನುವುದು ಗಮನಾರ್ಹ. ಅವನು ರಾಮನನ್ನು ಕುರಿತು ಹೀಗೆ ಹೇಳುತ್ತಾನೆ:" ಈ ಮೃಗವನ್ನು ರಾಕ್ಷಸನಾದ ಮಾರೀಚನೆಂದೇ ತಿಳಿದಿದ್ದೇನೆ; ಮೃಗಯಾ ವಿಹಾರಕ್ಕೆ ಬಂದ ಅನೇಕ ರಾಜರನ್ನು ಹಿಂದೆ ಕಾಮರೂಪಿಯಾದ ಮಾರೀಚನು ಕೊಂದು ಭಕ್ಷಿಸಿದ್ದಾನೆ ; ಹೇ ಪುರುಷವ್ಯಾಘ್ರನೆ, ಆ ಮಾರೀಚನಮಾಯೆಯೇ ಈ ಸುಳ್ಳು ಮೃಗ ; ರತ್ನವಿಚಿತ್ರವಾದ ಮೃಗವು, ಈ ಭೂಮಿಯಲ್ಲಿ ಇರಲು ಸಾಧ್ಯವಿಲ್ಲ ; ಆದ್ದರಿಂದ ಇದು ಅವನ ಮಾಯೆ ಎನ್ನುವುದರಲ್ಲಿ ಸಂಶಯವಿಲ್ಲ". ಲಕ್ಷ್ಮಣನ ಈ ಮಾತುಗಳಿಗೆ ಅಡ್ಡವಾಗಿ, ಸೀತೆ ಮುಗುಳು ನಗುತ್ತಾ, ಜಿಂಕೆಯ ಚರ್ಮದಿಂದ ಹೃತಚೇತನಳಾಗಿ ಮಾತಾಡುತ್ತಾಳೆ.

# ಸಾವಿನತ್ತ ನಡೆಯುತ್ತಿರುವ ರೈತಸಂಘ

(1ನೇ ಪುಟದಿಂದ)

ತನ್ನ ಸಂಘಟನೆಯನ್ನು ವ್ಯಾಪಕಗೊಳಿಸದೆ, ರಾಜ್ಯದಲ್ಲಿ ಒಂದು ಜಿಲ್ಲೆಯಲ್ಲಿ ಮಾತ್ರ, ಜಿಲ್ಲೆಯಲ್ಲಿ ಒಂದು ತಾಲ್ಲೋಕಿನಲ್ಲಿ ಮಾತ್ರ, ತೀವ್ರವಾದ ಪೂರ್ಣವಾದ ಸಂಘಟನಾ ರೀತಿಗೆ ತನ್ನನ್ನು ತೊಡಗಿಸಿಕೊಂಡು ಉಳಿಯಬೇಕಾಗಿದೆ.

**ಘಟನೆಯ ವಿವರ**

ದಿನಾಂಕ 21–9–84 ರಂದು ಸಂಜೆ 6 ಗಂಟೆಯಲ್ಲಿ ಸಕಲೇಶಪುರ ತಾಲ್ಲೂಕು ಎಸಳೂರು ಹೋಬಳಿ, ಹೇರೂರು ಗ್ರಾಮದ ಹೂವಣ್ಣ (27) ಮತ್ತು ಪುಟ್ಟಯ್ಯ (30) ಎಂಬ ದಲಿತ ಯುವಕರು ದೇವರಬನ ಕಾಫಿ ಎಸ್ಟೇಟಿನಲ್ಲಿ ಕೂಲಿಕೆಲಸ ಮುಗಿಸಿಕೊಂಡು ತಮ್ಮ ಊರಿಗೆ ಬರುತ್ತಿದ್ದಾಗ ದಾರಿ ಮಧ್ಯ ಹಾರಳ್ಳಿ ಗ್ರಾಮದ ರೈತಸಂಘದ ಅಧ್ಯಕ್ಷರಿಂದ ಕೃಷ್ಣೇಗೌಡ ಮತ್ತು ರೈತ ಸಂಘದ ಸದಸ್ಯರು ಪೂರ್ವಯೋಜಿತರಾಗಿ ಗುಂಪುಗೂಡಿ ಬೇಲಿ ಮರೆ ಕಾಯ್ದು ಕುಳಿತ್ತಿದ್ದು ದೊಣ್ಣೆ ಮತ್ತು ಮಚ್ಚುಗಳಿಂದ ಹಲ್ಲೆ ಕೊಲೆ ಪ್ರಯತ್ನ ನಡೆಸಿದ್ದಾರೆ. ಪರಿಣಾಮವಾಗಿ ಹೂವಣ್ಣ ಅವರ ಬಲಗಾಲು ಮುರಿದು ಕೈ ಮತ್ತು ದೇಹದ ಎಲ್ಲಾ ಭಾಗಗಳಿಗೂ ತೀವ್ರತರದ ಗಾಯುಗಳಾಗಿ, ಪುಟ್ಟಯ್ಯ ಎಂಬುವರಿಗೆ ಕೈ ಮುರಿದು ಹೋಗಿ ಕಾಲುಗಳು ಮತ್ತು ದೇಹದ ಎಲ್ಲಾ ಭಾಗಗಳಿಗೂ ಗಾಯುಗಳಾಗಿವೆ.

**ಹಲ್ಲೆಗೆ ಕಾರಣ**

ಹೂವಣ್ಣ ಮತ್ತು ಪುಟ್ಟಯ್ಯ ಹೆಚ್ಚು ಕೂಲಿ ದೊರಕುವ ದೇವರಬನಕಾಫಿ ಎಸ್ಟೇಟಿಗೆ ಕೆಲಸಕ್ಕೆ ಹೋಗುತ್ತಿದ್ದು ಆ ಗ್ರಾಮದ ರೈತ ಸಂಘದವರು ಕಡಿಮೆ ಕೂಲಿ ಕೆಲಸಕ್ಕೆ ಕರೆದಾಗ ನಿರಾಕರಿಸಿದ್ದು ಹೂವಣ್ಣ ಮತ್ತು ಪುಟ್ಟಯ್ಯ ಸ್ವಾಭಿಮಾನದ ವ್ಯಕ್ತಿಗಳಾಗಿದ್ದು ಹಾರಂಗಿ ಗ್ರಾಮದಲ್ಲಿರುವ ಹೋಟೆಲ್‌ನಲ್ಲಿ ಎಲ್ಲರಂತೆ ಸಮಾನವಾಗಿ ಕಾಫಿ ಟೀ, ಬೀಡಿ ಕುಡಿಯುವುದು, ಸಾರಾಯಿ ಅಂಗಡಿಯಲ್ಲಿ ಸಾರಾಯಿ ಕುಡಿಯುವುದು, ಹಾರಳ್ಳಿ ಗ್ರಾಮದ ಹೋಟೆಲ್ ಮತ್ತು ಸಾರಾಯಿ ಅಂಗಡಿಯಲ್ಲಿ ಇಂದಿಗೂ ಕೂಡ ಪ್ರತ್ಯೇಕ ಲೋಟ ಇಟ್ಟಿರುವುದನ್ನು ವಿರೋಧಿಸಿರುವುದು. ಇದರೊಂದಿಗೆ ರೈತ ಸಂಘದ ಅಧ್ಯಕ್ಷ ಕೃಷ್ಣೇಗೌಡನ ವಿರೋಧಿ ಸಿದ್ಧೇಗೌಡನ ಮನೆಕೆಲಸಕ್ಕೆ ಕೂಲಿಗೆ ಹೋಗಿದ್ದು. ರೈತ ಸಂಘದವರು ಇವೆಲ್ಲವನ್ನು ಸೈರಿಸದಿರುವುದು ಹಲ್ಲೆಗೆ ಮೂಲಕಾರಣವಾಗಿರುತ್ತೆ.

**ಪುಟ್ಟಯ್ಯ ಸಾವಿನವರೆಗೆ ವಿವರ**

21–9–1984—ಕೊಲೆ ಪ್ರಯತ್ನದ ದಿನ.

21–9–84—ಎಸಳೂರಲ್ಲಿ ಪ್ರಥಮ ಚಿಕಿತ್ಸೆ.

29–9–84ರಿಂದ 15 ದಿನ ಹಾಸನ ಆಸ್ಪತ್ರೆ ಚಿಕಿತ್ಸೆ. ಆಮೇಲೆ ಒಂದು ವಾರ ಮನೆಯಲ್ಲಿ ವಿಶ್ರಾಂತಿ. 18–10-84 ರಂದು ನಿಧನ.

**ರೈತ ಸಂಘದ ಸಾಧನೆ**

ಹಲ್ಲೆ ನಡೆಸಿದ ರೈತ ಸಂಘದವರು ಆ ದಿನವೇ ತಲೆ ಮರೆಸಿಕೊಂಡು ಸಕಲೇಶಪುರ ರೈತ ಸಂಘದ ಪದಾಧಿಕಾರಿಗಳ ಮೊರೆ ಹೋಗಿದ್ದು, ಹಲ್ಲೆಕೋರರ ಪರವಾಗಿ ರೈತ ಸಂಘದ ಪದಾಧಿಕಾರಿಗಳು ಎಸಳೂರು ಪೋಲೀಸರಿಗೆ ಫೋನ್ ಮಾಡಿ ಹಲ್ಲೆಕೋರರು ಸುಲಭವಾಗಿ ನುಣಚಿಕೊಳ್ಳುವ ಕೇಸುಗಳನ್ನು ದಾಖಲೆಮಾಡಿಸಲು ಸಫಲವಾಗಿದೆ.

**ಪೊಲೀಸ್ರೂ ಕೊಲೆಗಾರ ?**

ಪುಟ್ಟಯ್ಯ ಮತ್ತು ಹೂವಣ್ಣನವರ ಕೊಲೆ ಪ್ರಯತ್ನವು ಪೋಲೀಸರಿಗೆ ಸಾಮಾನ್ಯ ಹಲ್ಲೆಯಾಗಿ ಕಂಡು ಬಂದು ಸೆಕ್ಷನ್ 324ನ್ನು ದಾಖಲು ಮಾಡಿದ್ದಾರೆ ! ಪೋಲಿಸರ ಈ ಕುರುಡು ಸೆಕ್ಷನ್ ಕೇಳಿದರೇ ಹೃದಯಾಘಾತ ಆಗುವಂತಿದೆ. ಕೊಲೆ ಪ್ರಯತ್ನಗಳಿಗೆಲ್ಲ ಪೋಲಿಸರ ಸೆಕ್ಷನ್, ಕೊಲೆ ಮಾಡದವರನ್ನು ಹಂಗಿಸುತ್ತಿದೆ. ಕೊಲೆ ಮಾಡು, ಆದರೆ ಕಾನೂನು ಬದ್ಧವಾಗಿ, ಎನ್ನುತ್ತಿದೆ.ಯಾಕೆಂದರೆ ಪೋಲೀಸ್‌ಗೆ ಕೊಲೆಗಳೇ ಆಹಾರ. ಈಗ ಹಣ ತಿನ್ನಲು ಪೋಲಿಸರು ಕೊಲೆ ಕೇಸು ಹಾಕಿ ಯಾರನ್ನೂ ಬಂಧಿಸದೆ ಆಟಆಡುತ್ತಿದೆ.

# ....ರೈತಸಂಘದ ಬೆಳೆಯು ಬಗೆ

(3 ನೇ ಪುಟದಿಂದ)

3. ಹಾಸನ ತಾಲ್ಲೂಕು ಚನ್ನಂಗಿಹಳ್ಳಿಯಲ್ಲಿ ದಲಿತರಿಗೆ ಮಂಜೂರಾಗಿರುವ ಭೂಮಿಯನ್ನು ಕಬಳಿಸಿ ಅದರಲ್ಲಿ ವನಮಹೋತ್ಸವ ಆಚರಿಸಲು ರೈತ ಸಂಘದ ಮಾಸ್ತಿಗೌಡ ಹೊರಟಿದ್ದಾನೆ. ಶ್ರೀ ಮಂಜುನಾಥದತ್ತ ಉದ್ಘಾಟಿಸಲಿದ್ದಾರೆ!

4. ಸಕಲೇಶಪುರ ಹೆನ್ನಲಿ ಗ್ರಾಮದ ದಲಿತ ಸಾರಾಯಿ ಕಾಯಿಸುತ್ತಿದ್ದನೆಂದು ರೈತ ಸಂಘದವರು ಜಪ್ತಿ ಮಾಡಿ ಅಲ್ಲಿದ್ದ ಹೆಂಡ, ಹಂಡೆ, ಪಾತ್ರೆ ಕದ್ದಿರುವರು.

ಇಂಥ ಘಟನೆಗಳು ಗ್ರಾಮವನ್ನು ಮತ್ತೂ ಛಿದ್ರಗೊಳಿಸಿ, ಗ್ರಾಮವು ನಗರ ಯಂತ್ರದ ಪಾದ ನೆಕ್ಕುವಂತಾಗಲು ಸಹಕಾರಿಯಾಗುತ್ತಿದೆ. ನಗರ ಯಂತ್ರ ಯೋಜನೆಯನ್ನು ಭಾರತದಿಂದ ಓಡಿಸಿ ಭಾರತದ ಬಡವನಿಗೆ ಗಂಜಿ ದಕ್ಕಿಸುವ ವಾತಾವಣರಕ್ಕೆ ರೈತ ಸಂಘದ ಹಾಲಿ ಮಯ್ಯು ಮನಸ್ಸು ವ್ಯತಿರುಕ್ತವಾಗಿದೆ. ತನ್ನ ವಿರುದ್ಧ ತಾನೇ ಹೋರಾಡಿಕೊಳ್ಳುವ ವಿವೇಕ ಅದಕ್ಕಿಬಾರದೆ ಅದು ನಿಜವಾಗಿ ಚಿಗುರಲಾರದು. ಕಾಂಗ್ರೆಸ್ ಹುಲ್ಲಿನಂತೆ ಇದೂ ಒಂದು ರೈತುಲ್ಲಾಗಿ ವಿಪುಲವಾಗಿ ಸಂಖ್ಯಾದೃಷ್ಟಿಯಿಂದೇನೋ ಬೆಳೆದು ಕಳೆಯಾಗಬಹುದು.

ಇದು ಕಳೆಯಾಗಿ ರೈತುಲ್ಲಾಗದಂತೆ ತಡೆಗಟ್ಟಲು ರೈತಸಂಘದ ರಾಜ್ಯಮಟ್ಟದ ಸಮಾಜವಾದಿ ನಾಯಕತ್ವ ಕೈಕಾಲು ಆಡಿಸಿ ಸಾಮಾಜಿಕವಾದರೂ ಗ್ರಾಮವ ಸಮಾನ ಮಾಡುವತ್ತ ಆ ಒಟ್ಟಾದ ಗ್ರಾಮವನ್ನು ಸಾಂಸ್ಕೃತಿಕ ಆರ್ಥಿಕ ಸಮಾನತೆ ಕಡೆಗೆ ಒಯ್ಯುವ ಬೆಳಕಾಗಿಸಲು ಯತ್ನಿಸಲೇಬೇಕಾಗಿದೆ. ಯಾಕೆಂದರೆ ಕೆಲವು ದಿನಗಳ ಹಿಂದೆ ಪ್ರಗತಿಪರ, ಜಾತಿಮೂಢನಂಬಿಕೆ ವಿರೋಧಿ ಸಮಾಜವಾದಿಯಾಗಿದ್ದಂಥ ಈಗ ಹಾಲಿ ಹಾಸನ ಜಿಲ್ಲಾ ರೈತಸಂಘದ ಅಧ್ಯಕ್ಷ ಶ್ರೀ ಮಂಜುನಾಥದತ್ತರು ಇನ್ನೂ ಎಳೆ ವಯಸ್ಸಿನವರೇ ಆಗಿದ್ದೂ ಮೇಲಿನ ಘಟನೆಗಳಿಗೆ ಕುರುಡಾಗಿ ಸುತ್ತಲಿನ ಜಾತಿವಾದಿಗಳಿಗೆ ದತ್ತ ಆಹಾರವಾಗಿರುವುದು ಪ್ರಗತಿಪರರನ್ನು ನಡುಗಿಸುತ್ತಿದೆ. ದತ್ತ ಆಹಾರವಸ್ತು ಆಗದಿರಲಿ ; ರೈತ ಸಂಘವು ದಲಿತ ಸಂಘವಾಗಲಿ ಎಂದು 'ಪಂಚಮ' ಆಶಿಸುತ್ತದೆ.

ಹಾಸನ ತಾಲ್ಲೂಕು ಚನ್ನಂಗಿ ಹಳ್ಳಿಯಲ್ಲಿ 23 ಜನ ದಲಿತರಿಗೆ ತಲಾ 1.20 ಗುಂಟೆಯುಷ್ಟು 1982ರಲ್ಲಿ ಮಂಜೂರಾಗಿರುವ ಜಮೀನಿನಲ್ಲಿ ಆ ಗ್ರಾಮದ ರೈತ ಸಂಘದ ಮುಖಂಡ ಮಾಸ್ತಿಗೌಡನು 4 ತಿಂಗಳ ಹಿಂದೆ ದಲಿತರನ್ನು ಪಂಚಾಯ್ತಿಗೆ ಕರೆದು ತಲಾ 20 ಗುಂಟೆ ಜಮೀನು ನಮಗೆ ಬಿಟ್ಟು ಕೊಡಬೇಕೆಂದು ಬೆದರಿಕೆ ಹಾಕಿದಾಗ ಕೆಲವು ದಲಿತರು ಹೆದರಿ ಒಪ್ಪಿಕೊಂಡಿದ್ದಾರೆ. ಇನ್ನೂ ಕೆಲವರು ಒಪ್ಪದಿದ್ದಕ್ಕೆ ಅವರ ಮೇಲೆ ಸಾಮಾಜಿಕ ಬಹಿಷ್ಕಾರ ಹಾಕಿ ಪಂಚಾಯ್ತಿಯಲ್ಲಿ ಹಿಂಸಿಸಿ ಒಬ್ಬ ಯುವಕನಿಗೆ ಸಿಟ್‌ಸ್ಟ್ಯಾಂಡ್ ಮಾಡಿಸಿದ ಪ್ರಕರಣ ಇದೆ. ನಂತರ ದ. ಸಂ. ಸ. ದಲಿತರ ಭೂಮಿ ದಲಿತರಿಗೆ ಕೊಡಿ ಎಂದು ಒತ್ತಾಯಿಸಿದಾಗ ಚನ್ನಂಗಿ ಹಳ್ಳಿ ಗ್ರಾಮಕ್ಕೆ ಡಿಸಿ. ಎಸಿ. ಇತ್ಯಾದಿ ಅಧಿಕಾರಿಗಳು ಭೇಟಿ ಮಾಡಿದ್ದು ಅಲ್ಲದೆ ಕಳೆದ 3 ತಿಂಗಳಿಂದಲೂ ಪೋಲೀಸು ಕಾವಲಿದೆ. ಅಲ್ಲದೆ ದಲಿತರ ಎರಡು (2) ಆಡುಗಳನ್ನು ಹಿಡಿದು ಹಗಲಲ್ಲೆ (ಪೋಲೀಸು ಕಾವಲಿದ್ದಂತೆ) ತಿಂದಿದ್ದಾರೆ. ದಲಿತರ ಜೋಳದ ಪೈರು ನಷ್ಟ ಮಾಡಿದ್ದಾರೆ. ಈ ಎಲ್ಲಾ ದಲಿತರಿಗೆ ಅನ್ಯಾಯವಾಗಿರುವ ಬಗ್ಗೆ ಹಾಸನದ ಗ್ರಾಮಾಂತರ ಠಾಣೆಯಲ್ಲಿ 5 ಕೇಸುಗಳು ದಾಖಲಾಗಿವೆ. ಮುಂದೇನೋ ?

ಸಂಪಾದಕ, ಪ್ರಕಾಶಕ, ಮುದ್ರಕ : ಗೋವಿಂದಯ್ಯ, ಮಹೇಶ್ವರ ಮುದ್ರಣಾಲಯ, 407, 14ನೇ ಮೈನ್, ಸರಸ್ವತಿಪುರಂ, ಮೈಸೂರು–570 009